# ಮಧುರಖಂಡಿಯ ರಂಗ ಪರಂಪರೆ

(ಶ್ರೀ ಸಿದ್ಧಗಿರಿ ಸ್ವಾಮಿಗಳ ರಂಗ ಸೇವೆ)

(ಕನ್ನಡ ವಿಷಯದಲ್ಲಿ ಎಂ. ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಿದ ಸಂಶೋಧನ ನಿಬಂಧ)


* ಸಂಶೋಧಕರು *

**ಎಂ. ಎಂ. ಯಳವಿ**

ಬಿ. ಇ. ಎಸ್. ಕಾಲೇಜು ಕಡಪಟ್ಟಿ - ಜಮಖಂಡಿ
ಜಿ. ಬಾಗಲಕೋಟ

* ಮಾರ್ಗದರ್ಶಕರು *

ಡಾ. ಕೆ. ಆರ್. ಸಿದ್ಧಗಂಗಮ್ಮಾ

* ನಿರ್ದೇಶಕರು *

ಶ್ರೀ ಬಿ. ಆರ್. ದರೂರ
ಸಂಶೋಧನ ಕೇಂದ್ರ, ಹಾರೂಗೇರಿ ಜಿ.ಬೆಳಗಾವಿ






**ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ**

ಹಾರೂಗೇರಿ ಜಿ. ಬೆಳಗಾವಿ

ಮಾನ್ಯತೆ : ಕನ್ನಡ ವಿಶ್ವವಿದ್ಯಾಲಯ, ಹಂಪಿ

೨೦೦೯

# ಮಧುರಖಂಡಿಯ ರಂಗ ಪರಂಪರೆ

## ( ಶ್ರೀ ಸಿದ್ಧಗಿರಿ ಸ್ವಾಮಿಗಳ ರಂಗ ಸೇವೆ )

( ಕನ್ನಡ ವಿಷಯದಲ್ಲಿ ಎಂ. ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಾದರ ಪಡಿಸಿದ ಸಂಶೋಧನ ನಿಬಂಧ)

ಸಂಶೋಧಕರು

**ಎಲ್. ಎಲ್. ಯಳವಿ**

ಬಿ. ಇ. ಎಸ್. ಕಾಲೇಜು ಕಡಪಟ್ಟಿ–ಜಮಖಂಡಿ
ಜಿ. ಬಾಗಲಕೋಟ.



ಮಾರ್ಗದರ್ಶಕರು

ಡಾ. ಕೆ. ಆರ್. ಸಿದ್ಧಗಂಗಮ್ಮಾ

ನಿರ್ದೇಶಕರು,

ಶ್ರೀ ಬಿ. ಆರ್. ದರೂರ
ಸಂಶೋಧನ ಕೇಂದ್ರ ಹಾರೂಗೇರಿ ಜಿ. ಬೆಳಗಾವಿ

## ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರ

ಹಾರೂಗೇರಿ ಜಿ. ಬೆಳಗಾವಿ

ಮಾನ್ಯತೆ : ಕನ್ನಡ ವಿಶ್ವವಿದ್ಯಾಲ, ಹಂಪಿ

೨೦೦೮

# ಪ್ರಮಾಣ ಪತ್ರ

ಮಧುರಖಂಡಿಯ ರಂಗ ಪರಂಪರೆ (ಶ್ರೀ ಸಿದ್ಧಗಿರಿ ಸ್ವಾಮಿಗಳ ರಂಗ ಸೇವೆ) ಎಂಬ ಶೀರ್ಷಿಕೆಯ ನಿಬಂದವನ್ನು ಡಾ. ಕೆ. ಆರ್. ಸಿದ್ಧಗಂಗಮ್ಮಾ ಅವರ ಮಾರ್ಗದರ್ಶನದಲ್ಲಿ ನಾನು ಸಿದ್ಧಪಡಿಸಿದ್ದೇನೆ. ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ.ಫಿಲ್. ಪದವಿಗಾಗಿ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವನ್ನು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ನಾನು ಪ್ರಕಟಿಸಿರುವದಿಲ್ಲವೆಂದೂ ಹಾಗೂ ಯಾವದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದೂ ಈ ಮೂಲಕ ಪ್ರಮಾಣೀಕರಿಸುತ್ತೇನೆ.

ಸ್ಥಳ : ಹಾರೂಗೇರಿ :

ದಿನಾಂಕ : ೨೮-೦೯-೨೦೦೯

ಎಂ. ಎಂ. ಯಳವಿ

ಸಂಶೋಧನ ವಿದ್ಯಾರ್ಥಿ

ಶ್ರೀ ಬಿ. ಆರ್. ದರೂರ

ಸಂಶೋಧನ ಕೇಂದ್ರ ಹಾರೂಗೇರಿ

# ಧೃಡೀಕರಣ ಪತ್ರ

ಎಂ. ಎಂ. ಎಳವಿ ಇವರು ಮಧುರಖಂಡಿಯ ರಂಗ ಪರಂಪರೆ (ಶ್ರೀ ಸಿದ್ಧಗಿರಿ ಸ್ವಾಮಿಗಳ ರಂಗ ಸೇವೆ) ಎಂಬ ಶೀರ್ಷಿಕೆಯ ನಿಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ದಪಡಿಸಿದ್ದಾರೆ. ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನ ಕೇಂದ್ರದ ಮೂಲಕ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಕನ್ನಡ ವಿಷಯದಲ್ಲಿ ಎಂ. ಫಿಲ್. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ನಿಬಂಧವನ್ನು ಇವರು ಈ ಮೊದಲು ಇಡಿಯಾಗಿಯಾಗಲಿ, ಬಿಡಿಯಾಗಿಯಾಗಲಿ ಎಲ್ಲಿಯೂ ಪ್ರಕಟಿಸಿಲ್ಲವೆಂದು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವದಿಲ್ಲವೆಂದು ಧೃಡೀಕರಿಸುತ್ತೇನೆ.

ಸ್ಥಳ : ಹಾರೂಗೇರಿ

ದಿನಾಂಕ : ೨೮-೦೯-೨೦೦೯

ಡಾ. ಕೆ. ಆರ್. ಸಿದ್ಧಗಂಗಮ್ಮಾ
ಮಾರ್ಗದರ್ಶಕರು
ಲಿಂಗರಾಜ ಮಹಾವಿದ್ಯಾಲಯ
ಬೆಳಗಾವಿ

# ಕೃತಜ್ಞತೆಗಳು

ಕಡಪಟ್ಟಿಯ ಬಿ.ಇ.ಎಸ್. ಪದವಿ ಪೂರ್ವ ಕಾಲೇಜನಲ್ಲಿ ಕನ್ನಡ ಉಪನ್ಯಾಸಕನಾಗಿ ಸೇವೆ ಸಲ್ಲಿಸುತ್ತಿರುವ ನಾನು ಸಂಶೋಧನಾ ಕ್ಷೇತ್ರದಿಂದ ದೂರ ಉಳಿದಿದ್ದೆ. ಕಾರಣ ಮೇಲಿಂದ ಮೇಲೆ ಸಣ್ಣ ಪುಟ್ಟ ಕೆಲಸಗಳಿರುವುದರಿಂದ. ನನಗೆ ಮಾಧ್ಯಮಿಕ ಶಾಲೆಯಲ್ಲಿ ದೈಹಿಕ ಶಿಕ್ಷಕರಾಗಿ ಕಲಿಸಿದ ನನ್ನ ಗುರುಗಳಾದ ಶ್ರೀ ಎಸ್. ಡಿ. ಸಂತಿ ಸರ್ ಹತ್ತಿರ ಮಾತನಾಡುತ್ತ ಕುಳಿತ ಸಂದರ್ಭದಲ್ಲಿ. ನನ್ನ ಮಿತ್ರನಾದ ಮೃತ್ಯುಂಜಯ ಗವಿಮಠ ಬಂದು ಹಾರೂಗೇರಿಯ ಶ್ರೀ ಬಿ. ಆರ್. ದರೂರ ಸಂಶೋಧನಾ ಕೇಂದ್ರದಲ್ಲಿ ಎಂ.ಫಿಲ್ ಮಾಡು. ಎಂದು ಹೇಳಿದಾಗ ನಾನು ಹಿಂದು ಮುಂದು ನೋಡದೆ ಡಾ. ವ್ಹಿ. ಎಸ್. ಮಾಳಿ ಸರ್‌ನ್ನು ಕೇಳಿದಾಗ ಸರಿಯಾದ ಮಾಹಿತಿ ತಿಳಿಸಿದರು. ನನ್ನ ಮೂಲ ದಾಖಲಾತಿಯೊಂದಿಗೆ ಹೆಸರು ಹಚ್ಚಿದೆ. ಮುಂದೆ ಕೆಲವು ದಿನಗಳ ನಂತರ ಕ್ಲಾಸ್ ನಡೆದ ಸಂದರ್ಭದಲ್ಲಿ ಚಿಲುಮಿ ಸರ್ ಹಾಗೂ ನರೋಡೆ ಸರ್ ಬಹಳ ಸಹಾಯ ಮಾಡಿದರು. ಕ್ಲಾಸ್ ಮುಗಿದ ಮೇಲೆ ಹಂಪಿಗೆ ಹೋಗಿ ಪರೀಕ್ಷೆ ಮುಗಿಸಿ ಬಂದ ಕೆಲವು ದಿನಗಳ ಮೇಲೆ ಫಲಿತಾಂಶ ಪಾಸಾದ ಸುದ್ಧಿ ನಮ್ಮ ಪ್ರಾಚಾರ್ಯರಾದ ಶ್ರೀ ಬಿ. ಎಂ. ದುಗಾಣಿ ಹಾಗೂ ಸಿಬ್ಬಂದಿ ವರ್ಗದವರು ಮತ್ತು ನನ್ನ ತಂದೆ ತಾಯಿಗಳಿಗೆ ತಿಳಿಸಿದಾಗ ಬಹಳ ಸಂತೋಷ ವ್ಯಕ್ತ ಪಡಿಸಿದರು. ಪ್ರಥಮದಲ್ಲಿ ನನಗೆ ಅಂತ ಹೇಳಿ ಬೆಳಗಾವಿ ಕೆ. ಎಲ್. ಇ. ಸಂಸ್ಥೆಯ ಕನ್ನಡ ವಿಭಾಗದ ಮುಖ್ಯಸ್ಥರಾದ ಡಾ. ಕೆ. ಆರ್. ಸಿದ್ಧಗಂಗಮ್ಮಾ ಪ್ರಾಧ್ಯಾಪಕಿಯರನ್ನು ಭೇಟಿಯಾದಾಗ ಬಹಳ ವಿನಯ ನಮ್ರತೆಯಿಂದ ನೊಡಪ್ಪ ಸರಿಯಾಗಿ ಕೆಲಸಮಾಡು ಎಂದು ಹೇಳಿ ಸ್ವತಃ ತಾವೆ ಗ್ರಂಥಾಲಯಕ್ಕೆ ಬಂದು ಈ ಪುಸ್ತಗಳನ್ನು ಓದು ಎಂದು ಹೇಳಿಕೊಡುತ್ತಿದ್ದರು. ಮತ್ತು ಸಮಯ ಸಿಕ್ಕಾಗಲೇಲ್ಲ ಎಂ.ಫಿಲ್ ವಿಷಯದ ಬಗ್ಗೆ ಚರ್ಚೆಮಾಡಲು ಬರುತ್ತಿದ್ದರು. ಇಂತಹ ಆದರ್ಶವಾದಿಗಳನ್ನು ಯಾವಾಗಲೂ ಮರೆಯಲು ಸಾಧ್ಯವಿಲ್ಲ. ಹಾಗೂ ಅಚ್ಚು ಕಟ್ಟಾಗಿ ಡಿ.ಟಿ.ಪಿ. ಮಾಡಿದ ಮಲ್ಲಿಕಾರ್ಜುನ ಕ. ಬಡಚಿ ಇವರಿಗೆ ನನ್ನ ಅನಂತ ತುಂಬು ಹೃದಯದ ಕೃತಜ್ಞತೆಗಳು.

ಹಾರೂಗೇರಿ — ಎಂ. ಎಂ. ಯಳವಿ

ದಿನಾಂಕ : 28-09-2009

# ಪರಿವಿಡಿ

# ಅಧ್ಯಾಯ : ೧

## ಅಧ್ಯಯನದ ಪೂರ್ವ ಪೀಠಿಕೆ

ಪುಟ – ೧-೮

೧.೧ ಅಧ್ಯಯನದ ಉದ್ದೇಶ

೧.೨ ಅಧ್ಯಯನದ ಸ್ವರೂಪ

೧.೩ ಅಧ್ಯಯನದ ವ್ಯಾಪ್ತಿ

೧.೪ ಅಧ್ಯಯನದ ವೈಧಾನಿಕತೆ

ಅಧ್ಯಾಯ - ೧

# ಅಧ್ಯಯನದ ಪೂರ್ವ ಪೀಠಿಕೆ

ನಾಟಕ ಎಂದರೆ ಯಾವುದೇ ಒಬ್ಬ ಕಲಾಕಾರ ರಂಗ ಮಂಟಪದ ಮೇಲೆ ವೇಷಭೂಷಣದೊಂದಿಗೆ ತನ್ನ ಕಲೆಯನ್ನು ಪದರ್ಶಿಸುವುದಕ್ಕೆ ಸಾಮಾನ್ಯವಾಗಿ ನಾಟಕವೆಂದು ಕರೆಯುವರು. ಕನ್ನಡ ಜನಪದ ರಂಗಭೂಮಿಯ ಬಹಳ ವಿಶಾಲವಾದುದು. ಮತ್ತು ಅಷ್ಟೇ ಅದರ ಇತಿಹಾಸವೂ ದೊಡ್ಡದು ಹಾಗೂ ಸತ್ವವೂ ದೊಡ್ಡದಾಗಿದೆ. ಜನಪದ ರಂಗಭೂಮಿಯ ಪ್ರವೇಶಕ್ಕೆ ಮೊದಲು ಕನ್ನಡ ನಾಟಕಗಳ ಪ್ರಾಚೀನತೆಯನ್ನು ಮತ್ತು ಅದರ ಪರಂಪರೆಯನ್ನು ಅರಿಯುವುದು ನಮ್ಮೆಲ್ಲರಿಗೆ ಅವಶ್ಯವಾಗಿದೆ. ನಾಟಕದ ಅಧ್ಯಯನವನ್ನು ಭರತ ಮುನಿಯ ನಾಟ್ಯ ಶಾಸ್ತ್ರದಿಂದ ಆರಂಭಿಸಬೇಕಾಗುತ್ತದೆ. "ಭರತ ಮುನಿಯು ನಾಟಕ ಶಾಸ್ತ್ರಕ್ಕೆ 'ನಾಟ್ಯ ಶಾಸ್ತ್ರ' ಎಂದು ಹೆಸರಿಟ್ಟಿರುವುದು ಗಮನಾರ್ಹವಾಗಿದೆ. 'ನಾಟ್ಯ' ವೆನ್ನುವುದು 'ನೃತ್ಯಕ್ಕೆ' ಸಂಬಂದಿಸಿದ ಕಲಾವಿಧಾನವಾಗಿದೆ. ಭರತನ ಕಾಲದಲ್ಲಿ 'ನಾಟ್ಯ'ವು ಗೀತ ಪ್ರಧಾನವಾಗಿದ್ದಿತು, ಮತ್ತು ನೃತ್ಯ ಪ್ರಧಾನವಾಗಿದ್ದಿತು. ವಿಶೇಷವಾಗಿ ನಮ್ಮಲ್ಲಿಯ ಜನಪದ ನಾಟಕಗಳು ಗೀತ ಪ್ರಧಾನವಾಗಿಯೂ ನೃತ್ಯ, ಹಾವ, ಭಾವ ಅಭಿನಯಗಳಿಂದ ಕೂಡಿದವುಗಳೂ ಆಗಿರುವುದನ್ನು ಗಮನಿಸಬೇಕು. ನಾಟ್ಯ ಶಾಸ್ತ್ರ ನಿರ್ಮಾಣಪಥದಲ್ಲಿ ನೃತ್ಯ ನಾಟಕಗಳು ಗೇಯ ನಾಟಕಗಳು ಬಳಕೆಯಲ್ಲಿದ್ದಿರಬಹುದು.

ಇಲ್ಲಿ 'ನಾಟ್ಯ' ಎಂಬ ಶಬ್ದವು ದ್ರಾವಿಡರ ದಾಕ್ಷಿಣಾತ್ಯರ ಕಾಣಿಕೆಯೆಂದು ಹಲವಾರು ತಜ್ಞರು ಹಳುತ್ತಾರೆ. 'ನಾಟ್ಯ' ಶಬ್ದವು 'ನಟ್' ಧಾತುವಿನಿಂದ ಬಂದದ್ದು. 'ನಟ್' ಎಂಬುದಕ್ಕೆ ನೃತ್ಯಕ್ಕಿಂತಲೂ ವಿಶಾಲವಾದ ಅರ್ಥವಿದೆ. 'ನೃತ್ಯ'ವು 'ನೃತ್' ಎಂಬ ಧಾತುವಿನಿಂದ ಹುಟ್ಟಿದೆ. 'ನೃತ್' ಎಂದರೆ 'ಕುಣಿ' ಎಂದು ಅರ್ಥ ಆದರೆ 'ನಟ್' ಎನ್ನುವುದು. ಅಭಿನಯ ಅನುಕರಣಗಳನ್ನು ಒಳಗೊಂಡಿದೆ. ಅನುಕರಣವು ವೇಷಭೂಷಣಗಳನ್ನು ರೀತಿ ನೀತಿಗಳನ್ನು ಆಚಾರ-ವಿಚಾರಗಳನ್ನು ಒಳಗೊಂಡಿದೆ. ನಾಟ್ಯದಲ್ಲಿ ಕತೆಯಿದೆ, ರಸ ವಿದೆ, ಸಂಗೀತದ ಮಾಧುರ್ಯವಿದೆ ಹಾವ ಭಾವ ವಿಲಾಸಗಳಿಂದ ಕೂಡಿದ ಸುಮದುರ ಸಂಗಮ ವಿದೆ. ನಾಟಕವೇ ಒಂದು ಜನಪದ ಕಲಾ ವಿಧಾನ, ಅದು ರೂಪುಗೊಳ್ಳುವುದೇ ಜನತೆಯ ಮಡಿಲಲ್ಲಿ. ಆದ್ದರಿಂದ ನಾಗರಿಕ

ಸಮಾಜದಲ್ಲಿ ಜನಪದ, ಅಭಿಜಾತ ಎರಡೂ ರೂಪಗಳು ಅನ್ಯೋನ್ಯಾಶ್ರೀತಗಳೇ. ಸಮ ಸಮವಾಗಿ ಅಂದರೆ ಮೌಖಿಕವಾಗಿ ಬೆಳೆದು ಬಂದಿರುತ್ತವೆ. ಇಲ್ಲಿ ಒಂದರ ಇತಿಹಾಸ ಇನ್ನೊಂದರ ಸ್ವರೂಪಕ್ಕೆ ಸಾಧನವಾಗಿ ನಿಂತಿವೆ. ಈ ಹಿನ್ನೆಲೆಯಲ್ಲಿ ನಮ್ಮ ನಾಟಕಗಳ ಇತಿಹಾಸವನ್ನು ಮತ್ತು ಅದರ ವಿಕಾಸವನ್ನು ಅರಿಯವುದು ಅರ್ಥಪೂರ್ಣ, ಸಾಮಾನ್ಯವಾಗಿ ಕನ್ನಡ ನಾಟಕಗಳ ಚರಿತ್ರೆಯನ್ನು ತಿಳಿಯಬೇಕಾದರೆ.

೧) **ನಟರ ಪರಂಪರೆ**

೨) **ನಾಟಕ ಶಾಲೆಯ ರಂಗಭೂಮಿಯ ಪರಂಪರೆ**

೩) **ನಾಟಕಗಳ ಪರಂಪರೆಗಳನ್ನು ಅಧ್ಯಯನ ಮಾಡುವುದು ಅವಶ್ಯಕ**[೧]

"ಕ್ರಿ.ಶ. ೮ನೇ ಶತಮಾನದಲ್ಲಿದ್ದ ಓರ್ವ ಲೋಕ ವಿಖ್ಯಾತ ನಟನ ವಿಷಯವು ಶಿಲಾಶಾಸನದಿಂದ ತಿಳಿದು ಬರುತ್ತದೆ. ಜೊತೆಗೆ ಪಟ್ಟದ ಕಲ್ಲಿನಲ್ಲಿ ಪ್ರಾಪ್ತವಾದ ಒಂದು ಶಿಲಾಲೇಖವು 'ನಟಸೇವ್ಯ' ನೆಂಬುವನು ನರ್ತನದಲ್ಲಿಯೂ ಮತ್ತು ಅಭಿನಯ ದಲ್ಲಿಯೂ ಈ ಭುವನಾಂತರದಲ್ಲಿಯೇ ಅದ್ವಿತೀಯನಾಗಿದ್ದನು ಎಂದು ಹೇಳುತ್ತದೆ. ದುರ್ಗಸಿಂಹನ ಪಂಚತಂತ್ರದಲ್ಲಿ (೧೧೪೫) ಈ ವಿಚಾರವು ಬರುತ್ತದೆ. ಅರಮನೆಯ ರಾಣಿಯರೂ ಪಾತ್ರವನ್ನು ಧರಿಸಿ ಅಭಿನಯಿಸಿದರು. ಎಂಬ ಉಲ್ಲೇಖವಿದೆ. ಇತ್ತಲಾ ಮಹಾದೇವಿಯಂ ರೂಪಾದೇವಿಯು ಮೆಂಬಿರ್ವರುಂ ವಿನೋದಾರ್ಥದಿಂ ಸೀತೆಯುಂ ರಾಮನುಮಾಗಿ ಕೃತಕ ನಾಟಕವ ನಾಡಿ[೨] ಸಂತೋಷ ಪಡುತ್ತಿದ್ದರು ಎಂಬ ವಿಚಾರ ವಿದೆ.

## ೧.೧ ಅಧ್ಯಯನದ ಉದ್ದೇಶ

ಉತ್ತರ ಕರ್ನಾಟಕದಲ್ಲಿ ಮೊದಲಿನಿಂದಲೂ ದೊಡ್ಡಾಟ ಹಾಗೂ ಸಣ್ಣಾಟಗಳು ಬಳಕೆಯಲ್ಲಿವೆ. ಇವುಗಳಿಂದ ಪ್ರೇರಣೆಯನ್ನು ಪಡೆದುಕೊಂಡು ಬೆಳೆದು ಬಂದಿರುವ ಜಮಖಂಡಿ ತಾಲ್ಲೂಕಿನ ಮಧುರಖಂಡಿಯ ರಂಗ ಪರಂಪರೆ ಹಾಗೂ ಜನಪದ ಕಲಾವಿದರ ಬಗ್ಗೆ ಎಲ್ಲಿಯೂ ಉಲ್ಲೇಖವಾಗಿಲ್ಲ. ಹಾಗೂ ಅಧ್ಯಯನವೂ ಆಗಿಲ್ಲ. ಮಧುರಖಂಡಿಯ ರಂಗ ಪರಂಪರೆಯು ಅಲ್ಲಿರುವ ಪ್ರಸಿದ್ಧ ರಂಗ ಕಲಾವಿದರಾದ ಶ್ರೀ ಸಿದ್ದಗಿರಿ ಸ್ವಾಮಿಗಳು ಮತ್ತು ಅವರ ಜೊತೆಯಲ್ಲಿ ಪಾತ್ರ ಮಾಡಿದ ಬಸಲಿಂಗಯ್ಯಾ ಹಿಡಕಲ್, ಶಿವಮೋರ್ತಯ್ಯ ರೂಡಲಬಂಡಿ, ಶಂಕ್ರಯ್ಯಾ ಮಠಪತಿ, ಬಸಲಿಂಗಪ್ಪಾ ಮಾಳೇದ, ಈ ಎಲ್ಲ ನಾಟಕಕಾರರಿಂದ ಉಜ್ವಲಗೊಂಡಿದೆ. ಬಾಗಲಕೋಟ ಜಿಲ್ಲೆಯ ಮಧುರಖಂಡಿ ಗ್ರಾಮವು ಮೊದಲಿನಿಂದಲೂ ಜನಪದ ಸಾಹಿತ್ಯದ ತವರು.

ಇಲ್ಲಿಯ ಜನಪದ ಕಲಾವಿದರು ಅನೇಕ ನಾಟಕ ಮತ್ತು ಭಜನಾ ಕಂಪನಿಗಳನ್ನು ಸ್ಥಾಪಿಸಿದ್ದಾರೆ. ತಂಡೋಪ – ತಂಡವಾಗಿ ನೆರೆ ಗ್ರಾಮಗಳಲ್ಲಿ ನಡೆಯುವ ಜಾತ್ರೆ, ಓಕಳಿಗಳಲ್ಲಿ ತಮ್ಮ ಹವ್ಯಾಸಿ ನಾಟಕದ ಪ್ರತಿಭೆಯನ್ನು ಈಗಲೂ ಪ್ರದರ್ಶಸುತ್ತಿದ್ದಾರೆ, ಭಜನಾ ಕಂಪನಿಗಳಲ್ಲಿ ಕೈವಲ್ಯ ಪದ್ದತಿ, ಹಾಗೂ ಬಿಡ ಪದ (ಸ್ವತಃ ಪದ ಕಟ್ಟಿ) ಹಾಡುವುದು. ಮತ್ತು ತಾಳ ಬಾರಿಸುವುದು, ಚರ್ಮ ವಾದ್ಯ ಬಾರಿಸುವುದು, ಹೀಗೆ ಹಲವಾರು ವೈವಿಧ್ಯಮಯವಾದ ಕಲೆಗಳನ್ನು ಪ್ರದರ್ಶಿಸಿದ ಪ್ರತಿಭಾವಂತರು ಮಧುರಖಂಡಿ ಗ್ರಾಮದ ಜನ. ಅಲ್ಲಿ ರಂಗ ಪರಂಪರೆಯು ದೈವಾರಾಧನೆಯ ಹಿನ್ನೆಲೆಯಲ್ಲೇ ಬೆಳೆದು ಬಂದಿದೆ. ಅಕ್ಷರ ಸಂಸ್ಕೃತಿಯಿಂದ ಬಲುದೂರದಲ್ಲಿರುವ ಇಲ್ಲಿಯ ಕಲಾವಿದರು ರಂಗಕಲೆಯನ್ನು ತಮ್ಮ ಬದುಕಿನ ಜೀವಾಳವಾಗಿಸಿಕೊಂಡಿದ್ದಾರೆ. ಈ ಕಾರಣದಿಂದಾಗಿ ರಂಗಕಲೆಯು ಇಲ್ಲಿ ಹಚ್ಚು ಹಸುರಾಗಿ ಉಳಿದು ಬಂದಿದೆ. ಈ ಮಧುರಖಂಡಿಯ ರಂಗಕಲಾವಿದರು ಬಾಗಲಕೋಟ, ಬಿಜಾಪೂರ, ಬೆಳಗಾವಿ ಜಿಲ್ಲೆಗಳಲ್ಲಿ ಮಾತ್ರವಲ್ಲದೆ ಕರ್ನಾಟಕ ರಾಜ್ಯದ ಗಡಿ ರೇಖೆಯನ್ನು ಮೀರಿ ನೆರೆ ರಾಜ್ಯಗಳಾದ ಮಹಾರಾಷ್ಟ್ರ, ಆಂದ್ರ, ಗೋವಾಗಳಲ್ಲಿಯೂ ಸಹ ತಮ್ಮ ಪ್ರತಿಭೆಯನ್ನು ಮೆರೆದಿದ್ದಾರೆ.

ಆದರೆ ಈ ಸ್ಥಳದ ರಂಗ ಪರಂಪರೆಯೂ ನೆರೆ ಗ್ರಾಮಗಳಲ್ಲಿ ಮಾತ್ರವಲ್ಲ. ಉತ್ತರ ಕರ್ನಾಟಕದ ಕೆಲ ಪ್ರದೇಶಗಳಲ್ಲಿ ಪ್ರಸಿದ್ಧಿಯನ್ನು ಪಡೆದುಕೊಂಡರೂ ಸಹ ಈ ಪರಂಪರೆಯ ಕುರಿತು ಶ್ರೀ ಸಿದ್ದಗಿರಿ ಸ್ವಾಮಿಗಳ ರಂಗ ಬದುಕನ್ನು ಈತನಕ ಯಾವ ಗ್ರಂಥಗಲ್ಲಿಯೂ ಉಲ್ಲೇಖ ಮಾಡಿಲ್ಲ. ಆದ್ದರಿಂದ ನಾನು ಶ್ರೀ ಸಿದ್ದಗಿರಿ ಸ್ವಾಮಿಗಳ ರಂಗ ಬದುಕು ಹಾಗೂ ಈ ಗ್ರಾಮದಲ್ಲಿರುವ ಕಲಾವಿದರ ಕನ್ನಡ ರಂಗಕಲೆಯನ್ನು ಗುರುತಿಸಬೇಕೆಂಬ ಉದ್ದೇಶದಿಂದ ಈ ಪ್ರಬಂಧವನ್ನು ಆರಂಭಿಸಿದ್ದೇನೆ.

## ೧.೨ ಅಧ್ಯಯನದ ಸ್ವರೂಪ

ಪ್ರಸ್ತುತ ಅಧ್ಯಯನವು ನಾಲ್ಕು ಅಧ್ಯಾಯಗಳನ್ನು ಒಳಗೊಂಡಿದ್ದು. ಮೊದಲನೆಯ ಅಧ್ಯಾಯದಲ್ಲಿ ಅಧ್ಯಯನದ ಸ್ವರೂಪ, ಉದ್ದೇಶ, ವ್ಯಾಪ್ತಿ ಹಾಗೂ ವೈಧಾನಿಕತೆಯನ್ನು ವಿವರಿಸಲಾಗಿದೆ.

ಪ್ರವೇಶದಲ್ಲಿ ನಾಟಕ ಎಂದರೇನು ? ಹಾಗೂ ನಾಟ್ಯ ಶಾಸ್ತ್ರ ಮತ್ತು ನೃತ್ಯ ಹೇಗೆ ಬೆಳೆದು ಬಂದವು, ಭರತನ ಕಾಲದಲ್ಲಿ ನಾಟ್ಯ ಹೇಗೆ ಪ್ರಧಾನ ಕಲಾವಿಧಾನವಾಗಿದೆ. ಎಂಬ ವಿಚಾರಗಳ ಬಗ್ಗೆ ಚರ್ಚಿಸಲಾಗಿದೆ. ಇದೂ ಅಧ್ಯಯನಕ್ಕೆ ನೆಲೆಗಟ್ಟು .

ಎರಡನೆಯ ಅಧ್ಯಾಯ ಇವು ಕರ್ನಾಟಕದ ರಂಗ ಪರಂಪರೆಯನ್ನು ಹಾಗೂ ಆಸ್ಥಾನ ರಂಗಭೂಮಿಯ ಪ್ರದರ್ಶನಗಳನ್ನು ವಿವರಿಸುತ್ತದೆ. ಜಮಖಂಡಿಯ ಮತ್ತು ಮಧುರಖಂಡಿಯಲ್ಲಿ ರಂಗ ಕಲೆ ಬೆಳೆದು ಬಂದ ಬಗೆಯನ್ನು ರಂಗಕಲಾವಿದರ ಹಾಗೂ ಶಾಸನಗಳ ಆಧಾರದ ಮೇಲೆ ವಿವರಣೆ ನೀಡಲಾಗಿದೆ.

ಮಧುರಖಂಡಿ ರಂಗ ಕಲೆಯ ಇತಿಹಾಸವನ್ನು ದಾಖಲಿಸುವುದು ಹಾಗೂ ಅದರ ವೈಶಿಷ್ಟ್ಯತೆಯನ್ನು ಗುರುತಿಸುವದು ಸಮಕಾಲೀನ ಅಧ್ಯಯನದ ವಿಷಯ ಅಗತ್ಯವಾಗಿದೆ.

ಉತ್ತರ ಕರ್ನಾಟಕದ ಸಂದರ್ಭದಲ್ಲಿ ಆಧುನಿಕ ಜನಪದ ರಂಗಕಲೆಯ ಚರಿತ್ರೆಯು ಬಹುಮುಖ್ಯ ಘಟ್ಟ. ಒಂದು ಕಡೆ ಮರಾಠಿ ಶಿಕ್ಷಣ? ಜೊತೆಗೆ ಆಧುನಿಕ ಬದುಕಿನ ಒಲವುಗಳು, ಹೊಸತನದ ತುಡಿತ, ಮೊದಲಾದ ಅಂಶಗಳಿಂದ ಉತ್ತರ ಕರ್ನಾಟಕ ಗ್ರಾಮಗಳಲ್ಲಿ ಬದುಕು ಹೊಸ ತಿರುವು ಪಡೆಯಿತು. ಈ ಸಂದರ್ಭದಲ್ಲಿ ಮಧುರಖಂಡಿಯಲ್ಲಿ ಹೊಸ ಚೈತ್ರ ಕಂಡಿತು. ನಿಜವಾದ ಅರ್ಥದಲ್ಲಿ ಈ ಚೈತ್ರಕ್ಕೆ ಮುಂಜಾವಿನ ತಂಗಾಳಿಯಾಗಿ ಸುಳಿದವರು ಶ್ರೀ ಸಿದ್ದಗಿರಿ ಸ್ವಾಮಿಗಳು. ಇವರು ಮಧುರಖಂಡಿ ರಂಗ ಪರಂಪರೆಗೆ ಭರತ ಇದ್ದಂತೆ. ಅವರ ಮಾರ್ಗದರ್ಶನದಲ್ಲಿ ಬಂದ ಅನೇಕ ರಂಗ ಕಲಾವಿದರು ಇಂದು ಉತ್ತರ ಕರ್ನಾಟಕದಲ್ಲಿ ಅಷ್ಟೇ ಅಲ್ಲ ನೆರೆ

ರಾಜ್ಯಗಳಲ್ಲೂ ಅಳಿಸಲಾಗದ ಹೆಜ್ಜೆ ಮೂಡಿಸಿದ್ದಾರೆ. ಸಿದ್ದಗಿರಿ ಸ್ವಾಮಿಗಳ ಜೀವನ ಚರಿತ್ರೆಯನ್ನು ವಿವರಿಸುವುದು ಮೂರನೆಯ ಅಧ್ಯಾಯ.

ಸಿದ್ದಗಿರಿ ಸ್ವಾಮಿಗಳು ಹೊತ್ತಿಸಿದ ದೀಪ ಅವರ ಊರಲ್ಲಿ ಮಾತ್ರ ಬೆಳಕು ನೀಡಬಾರದು ನಾಡಿನಾದ್ಯಂತ ಈ ಜ್ಯೋತಿ ಬೆಳಗಬೇಕೆಂದು ಅವರ ಕಲೆಯನ್ನು ಯುವ ಪೀಳಿಗೆಯು ಪ್ರಸ್ತುತದಲ್ಲಿಯೂ ಮುಂದುವರೆಯಿಸಿಕೊಂಡು ಹೊರಟಿರುವುದು ಗಮನಾರ್ಹ ಈ ಎಲ್ಲ ಹೊಸ ಬೆಳವಣಿಗೆಗಳ ಬಗ್ಗೆ ನಾಲ್ಕನೇ ಅಧ್ಯಾಯದಲ್ಲಿ ಗುರುತಿಸಲಾಗಿದೆ.

ಐದನೆಯ ಅಧ್ಯಾಯವು ಸಮಾರೋಪ. ಪ್ರಸ್ತುತ ಅಧ್ಯಯನದ ಒಟ್ಟು ಸಾರಾಂಶವನ್ನು ಇದು ಒಳಗೊಂಡಿದೆ.

## ೧.೩ ಅಧ್ಯಯನದ ವ್ಯಾಪ್ತಿ

ಪ್ರಸ್ತುತ ಅಧ್ಯಯನಕ್ಕೆ ಮಧುರಖಂಡಿ ರಂಗ ಪರಂಪರೆಯ ವಸ್ತು ವಿಶಾಲವಾದುದು. ಅದು ಹಲವಾರು ರಂಗಕಲಾವಿದರ, ಭಜನಾಕಾರರ ಹಾಗೂ ಜನಪದ ಕಲಾವಿದರ ಬದುಕನ್ನು ಒಳಗೊಂಡಿದೆ. ಇಲ್ಲಿ ಅವರ ಪರಿಚಯವನ್ನು ನೀಡಿ, ಮತ್ತು ಅಲ್ಲಿಯ ರಂಗ ಬದುಕಿನ ವಿಶ್ಲೇಷಣೆಯನ್ನು ನಾನು ಸಂಶೋಧನಾ ಕಿರು ಪ್ರಬಂಧದ ವ್ಯಾಪ್ತಿಗೆ ಅಳವಡಿಸಲು ಇಚ್ಛಿಸಿದ್ದೇನೆ. ಶೈಕ್ಷಣಿಕ ಶಿಸ್ತಿನ, ಸೀಮಿತ ಅಧ್ಯಯನದ ಅವಧಿಯನ್ನು ಈ ನಿರ್ದಿಷ್ಟ ಕ್ಷೇತ್ರಕ್ಕೆ ಒಳಪಡಿಸಿ ಮಿತಗೊಳಿಸುವುದು ಅನಿವಾರ್ಯವಾಗಿದೆ.

## ೧.೪ ಅಧ್ಯಯನದ ವೈಧಾನಿಕತೆ

ರಂಗ ಕಲೆಯ ಅಧ್ಯಯನ ಸುಲಭವಲ್ಲ ಹಲವಾರು ವಿಧಾನಗಳ ಮೂಲಕ ರಂಗ ಕಲೆಯ ಕ್ಷೇತ್ರ ಪ್ರವೇಶಿಸಿದರೂ, ಎಲ್ಲವೂ ಅಧ್ಯಯನದ ತೆಕ್ಕೆಗೆ ಸಿಕ್ಕುವುದಿಲ್ಲವೆಂಬುದು ಎಲ್ಲರಿಗೂ ವಿದಿತ ವಿಷಯ. ಆದ್ದರಿಂದ ಇಲ್ಲಿ ಸರಳ ಮಾದರಿಯನ್ನೇ ಆಯ್ದುಕೊಳ್ಳಲಾಗಿದೆ.

ಮಧುಕರಖಂಡಿಯ ಜನಪದ ಪರಂಪರೆಯನ್ನು ವರ್ಗೀಕರಿಸುವುದೇ ಮೊದಲು ಸವಾಲು. ವಿವಿಧ ನೆಲೆಗಳಿಂದ ರಂಗ ಪರಂಪರೆಯನ್ನು ವಿಂಗಡಿಸಲು ಪ್ರಯತ್ನಿಸಿದರೂ ಕೆಲವು ಜನಪದ ಕಲೆಗಳು ವರ್ಗೀಕರಣದಿಂದ ಹೊರಗುಳಿಯುತ್ತವೆ. ಇದುವೇ ಜನಪದ ಪರಂಪರೆಯ ವೈವಿಧ್ಯತೆ. ಇಲ್ಲಿ ನನ್ನ ಅಧ್ಯಯನದಲ್ಲಿ ಮಧುರಖಂಡಿ ಗ್ರಾಮದಲ್ಲಿ ಹೆಚ್ಚು ರಂಗ ಕಲಾವಿದರಿರುವುದರಿಂದ ನಾಟಕ ಪರಂಪರೆಗೆ ಒತ್ತು ನೀಡಲಾಗಿದೆ, ಮತ್ತು ನಾಟಕ ಪರಂಪರೆಯ ಪ್ರಾಮುಖ್ಯತೆಯನ್ನು ವಿವರಿಸಲಾಗಿದೆ. ಮಧುರಖಂಡಿಯ ಸಮಗ್ರ ಜನಪದ ರಂಗ ಪರಂಪರೆಯ ಅಧ್ಯಯನವನ್ನು ಇಲ್ಲಿ ಪ್ರಮುಖ ಕೇಂದ್ರವಾಗಿಸಿಕೊಂಡು ಸಂಯೋಜಿಸಲಾಗಿದೆ. ಅದರಲ್ಲಿಯೂ ಸಿದ್ದಗಿರಿ ಸ್ವಾಮಿಗಳ ಸಾಂಸ್ಕೃತಿಕ ಕೊಡುಗೆಯನ್ನು ವಿಶೇಷವಾಗಿ ಚರ್ಚಿಸಲಾಗಿದೆ.

### ಟಿಪ್ಪಣಿಗಳು

೧) ಅಪರಾಳ ತಮ್ಮಣ್ಣ ಕೃತ : ಶ್ರೀ ಕೃಷ್ಣ ಪಾರಿಜಾತ –ಪುಟ ೧

೨) ಅದೇ : ಪುಟ ೩

# ಅಧ್ಯಾಯ : ೨

## ರಂಗ ಪರಂಪರೆ

ಅಧ್ಯಾಯ - ೨

# ರಂಗ ಪರಂಪರೆ

## ೨.೧ ಕರ್ನಾಟಕ ರಂಗ ಪರಂಪರೆ

ಪರಂಪರೆ ಎಂದರೆ ಹಲವಾರು ತಲೆ ಮಾರುಗಳಿಂದ ನಡೆದುಕೊಂಡು ಬಂದಿರುವ ಆಚಾರ–ವಿಚಾರ ಬದುಕಿನ ಕ್ರಮಗಳನ್ನು ಒಳಗೊಂಡಿದೆ. ಕರ್ನಾಟಕದಲ್ಲಿ ಸಾಹಿತ್ಯ, ನಾಟಕ, ಲಲಿತಕಲೆಗಳಿಗೆ ಉಜ್ವಲವಾದ ಪರಂಪರೆ ಇದೆ. ರಂಗ ಪರಂಪರೆಯು ಕರ್ನಾಟಕಕ್ಕೆ ಘನತೆ ಗೌರವ ತಂದುಕೊಟ್ಟಿದೆ. ಈ ನಾಟಕ ಪರಂಪರೆಯನ್ನು

೧] **ಜನಪದ ರಂಗಭೂಮಿ**

೨] **ವೃತ್ತಿ ರಂಗಭೂಮಿ**

೩] **ಹವ್ಯಾಸಿ ರಂಗಭೂಮಿ ಎಂದು ಮೂರು ಪರಂಪರೆಯಾಗಿ ವಿಭಜಿಸಬಹುದು.**

ಮೊಟ್ಟಮೊದಲು ಬಂಗಾಳದಲ್ಲಿ ಅಸ್ತಿತ್ವಕ್ಕೆ ಬಂದ ಭಾರತೀಯ ಆಧುನಿಕ ರಂಗಭೂಮಿ ಕರ್ನಾಟಕಕ್ಕೆ ಬರಬೇಕಾದರೆ ಸುಮಾರು ನೂರು ವರ್ಷ ಬೇಕಾಯಿತು ಯಾಕೆಂದರೆ ಇದಕ್ಕೆ ಈಗಾಗಲೇ ಇದ್ದ ಈ ನಾಡಿನ ಜನಪದ ಕಲಾವಿದರ ಶ್ರೀಮಂತ ಪರಂಪರೆ ಕಾರಣ ಕರ್ನಾಟಕದಲ್ಲಿ ಆಧುನಿಕ ರಂಗಭೂಮಿ ಅಸ್ತಿತ್ವಕ್ಕೆ ಬರಲು ಕಾರಣವಾದ ಪರಿಸ್ಥಿತಿಯೂ ಕೂಡ ಭಿನ್ನವಾಗಿ ಕಂಡುಬಂದಿದೆ. ಅದು ನಾಡು – ನುಡಿಯ, ಮತ್ತು ಸಂಸ್ಕೃತಿಯ ಅಭಿಮಾನದಿಂದ ಪೂರಕವಾಗಿ ಬೆಳೆದಿದೆ. ಈ ಶತಮಾನದ ಕೊನೆಗೆ ಉತ್ತರ ಕರ್ನಾಟಕದಲ್ಲಿ ವಿಜೃಂಭಿಸಿದವು. ಮರಾಠಿ ರಂಗ ಕಲೆಯು ಥಳಥಳಿಸುವ ಬೆಳಕು, ನಯನಮನಮೋಹಕವಾದ ಅಲ್ಲಿಯ ದೃಶ್ಯಗಳು, ಅದ್ದೂರಿಯ ರಂಗ ಸಜ್ಜಿಕೆ ಮತ್ತು ಹೊಸ ಹೊಸ ನಾಟಕಗಳು ಹಾಗೂ ಸುಮಧುರವಾದ ಸಂಗೀತ, ಪ್ರಬುದ್ಧ ಪಾತ್ರಾಭಿನಯಗಳಿಂದ ಈ ಮರಾಠಿ ಕಂಪನಿಗಳು ಉತ್ತರ ಕರ್ನಾಟಕದಲ್ಲಿ ಗದ್ದಲವನ್ನೇ ಎಬ್ಬಿಸಲು ಕಾರಣವಾದವು. ಇವುಗಳ ಕುತಂತ್ರಕ್ಕೆ ಸಿಲುಕಿದ ಸುಶಿಕ್ಷಿತ ಕನ್ನಡಿಗರೂ ಮರಾಠಿ ನಾಟಕಗಳನ್ನೇ ಪ್ರದರ್ಶಿಸಲು ಪ್ರಾರಂಭಿಸಿದರು. ಹೀಗೆ ಕರ್ನಾಟಕ ರಂಗಭೂಮಿಯು ಹೊರಗಿನವರ ಆಕ್ರಮಣದಿಂದ ಮತ್ತು ನಾಡವರ ನಿರಭಿಮಾನದಿಂದ ಮರಾಠಿಮಯವಾಗಿ ಪರಿಣಮಿಸಿತು. ಈ ಅಬ್ಬರದಲ್ಲಿ ಕನ್ನಡ ಜನಪದ ರಂಗಭೂಮಿಯ

ಪಾತ್ರಾಭಿನಯಗಳು ಆಕರ್ಷಣೆಯನ್ನು ಕಳೆದುಕೊಂಡವು. ಕರ್ನಾಟಕದ ಈ ಸಾಂಸ್ಕೃತಿಕ ಬದುಕಿನಲ್ಲಿ ಕಂಡುಬರುವ ವಿಷಮ ವಾತಾವರಣವು ನಾಡು-ನುಡಿಗಳ ಅದಮ್ಯ ಪ್ರೀತಿಯಿದ್ದ ಕಲಾವಿದರಿಗೆ ಯೋಚಿಸುವಂತಾಯಿತು. ಅವರು ಕರ್ನಾಟಕದಲ್ಲಿ ನಾಟಕ ಇಲ್ಲ ಮತ್ತು ನಟ ನಟಿಯರಿಲ್ಲ. ಮುಂದೆ ಬರುವ ಆಶೆ ಕೂಡ ಇಲ್ಲ ಎಂದು ತಿಳಿದರು. ಧಾರವಾಡ ಸೀಮೆಯ ಜನರ ಉದಾಸೀನತೆಯು ಕಲಾಕಾರರ ಮನಸ್ಸನ್ನು ಕೆರಳುವಂತೆ ಮಾಡಿತು. ಅಂತೆಯೇ ಕನ್ನಡಿಗರಲ್ಲಿ ಜಾಗೃತಿ ಮೂಡಿಸಲು, ಮರಾಠಿ ನಾಟಕಗಳು ಪ್ರಭಾವ ಕುಗ್ಗುವಂತೆ ಮಾಡಲು ಕನ್ನಡ ನಾಟಕ ಕಲೆಯನ್ನು ಬೆಳೆಸಲು ಕೆಲವರು ಪ್ರಯತ್ನಿಸಿದರು. ಮರಾಠಿ ರಂಗ ಕಲೆಗೆ ಸರಿದೂಗುವಂತೆ ಕನ್ನಡ ರಂಗಭೂಮಿಯನ್ನು ಹುಟ್ಟು ಹಾಕಲು ಅನೇಕ ರಂಗಕಲಾವಿದರು ತಮ್ಮ ಬದುಕನ್ನೇ ಸವೆಸಿದ್ದಾರೆ. ಕರ್ನಾಟಕದ ರಂಗಭೂಮಿಯಲ್ಲಿ ರಂಗ ಕಲೆಯ ಬೀಜ ಬಿತ್ತಿ ಹುಲುಸಾದ ಪಸಲನ್ನು ಬೆಳೆಸಿದ್ದಾರೆ. ಹೀಗಾಗಿಯೇ ಉತ್ತರ ಕರ್ನಾಟಕದಲ್ಲಿ ಜನಪದ ರಂಗ ಪರಂಪರೆ ಶ್ರೀಮಂತವಾಗಿದೆ.

"ಉತ್ತರ ಕರ್ನಾಟಕವು ರಂಗಪರಂಪರೆಗೆ ಜನ್ಮಕೊಟ್ಟರೆ ಮೈಸೂರ ಪ್ರದೇಶದಲ್ಲಿ ಅದರಲ್ಲಿಯೂ ವಿಶೇಷವಾಗಿ ರಾಜಾಶ್ರಯದಲ್ಲಿಯೇ ಎಲ್ಲ ಕಲೆಗಳು ಪೋಷಿಸಲ್ಪಡುತ್ತಿದ್ದುದರಿಂದ ಈ ರಂಗ ಕಲೆಯಾದರೂ, ಮಹಾರಾಜರ ಪ್ರೋತ್ಸಾಹ ಪಡೆದುಕೊಂಡು ಅಸ್ತಿತ್ವಕ್ಕೆ ಬಂದವೆಂದು ಪ್ರತೀತಿ ಇದೆ[೧] ಹೀಗೆ ಉತ್ತರ ಕರ್ನಾಟಕದ ರಂಗಕಲೆಯಲ್ಲಿ ಕಂಡು ಬರುವ ಜಮಖಂಡಿ ತಾಲೂಕಿನ ಮಧುರಖಂಡಿ ಎಂಬ ಗ್ರಾಮವು ರಂಗಕಲೆಯ ದೃಷ್ಟಿಯಿಂದ ಅತ್ಯುನ್ನತ ಸ್ಥಾನ ಪಡೆದುಕೊಂಡಿದೆ. ಆ ಪರಂಪರೆಯ ಅಧ್ಯಯನವು ಇಲ್ಲಿದೆ.

## ೨.೨ ಜಮಖಂಡಿ ರಂಗ ಪರಂಪರೆ

ಜಮಖಂಡಿಯಲ್ಲಿ ರಂಗ ಕಲೆಯು "೧೯೩೫ ಅಗಸ್ಟ್ ತಿಂಗಳು ನಾಗರ ಪಂಚಮಿ ದಿವಸ ದತ್ತಂಭಟ್ಟ ಒಡೆಯರ ನೇತೃತ್ವದಲ್ಲಿ ಶ್ರೀ ಗಜಾನನ ನಾಟ್ಯ ಸಂಘ, ಜಮಖಂಡಿಯ ಮೂಲಕ ಪ್ರಾರಂಭವಾಯಿತು. ಮುಂದೆ೧೯೩೬ರಲ್ಲಿ ಕರ್ನಾಟಕದ ಹೆಸರಾಂತ ಕಲಾವಿದರಾದ ಗುರುಡಸದಾಶಿವ ರಾಯರ ಮಂಡಳಿ ಗದಗ ಪ್ರಾರಂಭವಾಗಲು ಮೊದಲಿದ್ದ ಎಲ್ಲ ರಂಗ ಕಲಾವಿದರು ನಿರ್ಲಕ್ಷಕ್ಕೊಳಗಾದರು. ಅಸಹಾಯಕರಾದ ರಂಗ ಕಲಾವಿದರು ಇದನ್ನೇ ನೆಪ ಮಾಡಿಕೊಂಡು ಕೃಷ್ಣಾ ಜಹಗೀರದಾರ, ಸೀತಾರಾಮ ಶಾಸ್ತ್ರಿ ಬಿದರಿ, ದೇವಗಿರಿ ಶಿವಮೂರ್ತಿ ಸ್ವಾಮಿ, ಗುರಪ್ಪ ಚಾಲವಾಡಿ, ದತ್ತ ಭಟ್ಟ ಸಂಗಮ ಮುಂತಾದವರು ಶ್ರೀ ಗರುಡ ಸದಾಶಿವ ರಾಯರ ಅನುಮತಿಯ ಮೇರೆಗೆ ಆ ಕಂಪನಿಯಿಂದ ಹೊರಬಂದು ದತ್ತಂಭಟ್ಟ ಒಡೆಯರ ನೇತೃತ್ವದಲ್ಲಿ ಈ ಶ್ರೀ ಗಜಾನನ ನಾಟ್ಯ ಸಂಘವನ್ನು ಒಟ್ಟುಗೂಡಿಸಲು ಕಾರಣರಾದರು, ಗುಳೇದಗುಡ್ಡ ಗಂಗೂಬಾಯಿಯವರ ಶ್ರೀ ಕೃಷ್ಣ ನಾಟಕ ಮಂಡಳಿ ವಿಶ್ರಮಿಸಿ ಬಹುದಿನಗಳಾಗಿದ್ದವು. ಈ ಕಲಾವಿದ ಗೆಳೆಯರೆಲ್ಲ ನೇರವಾಗಿ ಗುಳೇದ ಗುಡ್ಡಕ್ಕೆ ಬಂದು ಅಲ್ಲಿರುವ ನಾಟಕ ಸಾಮಾನುಗಳನೆಲ್ಲ ಬಾಡಿಗೆಯ ಮೇಲೆ ಪಡೆದುಕೊಂಡರು, ಈ ಸಂದರ್ಭದಲ್ಲಿ ದತ್ತ ಭಟ್ಟರ ನಿಕಟವರ್ತಿ ಬಾದಾಮಿ ಬನಶಂಕರಿ ದೇವಸ್ಥಾನದ ಅರ್ಚಕ ತೀರ್ಥಭಟ್ಟರು ಧಾರಾಳವಾಗಿ ಧನ ಸಹಾಯ ಮಾಡಿದರು[೨]

ಮುಂದೆ ಇದೇ ಕಲಾವಿದರಿಂದ 'ಸತ್ಯವಾನ ಸಾವಿತ್ರಿ' ಎಂಬ ನಾಟಕದ ಪ್ರಥಮ ಪ್ರಯೋಗವು ಅದ್ದೂರಿಯಾಗಿ ನೆರವೇರಿತು. ಇದೇ ಪರಂಪರೆಯನ್ನು ಮೈಗೂಡಿಸಿಕೊಂಡಿರುವ ಈ ಜಮಖಂಡಿಯ ಕಲಾವಿದರ ಜೊತೆಗೆ ಸೇರಿಕೊಂಡು ನೆರೆ ಗ್ರಾಮಗಳಾದ ಮಧುರಖಂಡಿ, ಹುನ್ನೂರ, ರಬಕವಿ, ಬನಹಟ್ಟಿ, ನಾವಲಗಿ (ಸಂಗ್ಯಾಬಾಳ್ಯಾ)ಯ ಅನೇಕ ನಾಟಕ ಕಂಪನಿಗಳು ಹುಟ್ಟಿಕೊಂಡವು, ಈ ರಂಗ ಕಲಾವಿದರ ವೈಭವ ನೋಡಲೆಂದೇ ಜನ ಕಿಕ್ಕಿರಿರು ತುಂಬುತ್ತಿದ್ದರು.

---

-ಶ್ರೀ ಮಲ್ಲಯ್ಯ ಹಿಡಕಲ್ ಅವರ ಜೊತೆಯ ಸಂದರ್ಶನದಿಂದ ದೊರಕಿದ ಮಾಹಿತಿ.

## ೨.೩ ಮಧುರಖಂಡಿಯ ರಂಗ ಪರಂಪರೆ

ಮಧುರಖಂಡಿಯಲ್ಲಿ ರಂಗ ಕಲೆಯ ಪರಂಪರೆಯು ೧೯೨೯ರಲ್ಲಿ 'ಶ್ರೀ ಕೃಷ್ಣ ಪಾರಿಜಾತ ನಾಟಕದ ಪ್ರದರ್ಶನದಿಂದ ಪ್ರಾರಂಭವಾಯಿತು. ಈ ಗ್ರಾಮದಲ್ಲಿ ಮೊದಲು ರಂಗ ಕಲೆಗೆ ಹುಟ್ಟು ಹಾಕಿದವರೆಂದರೆ ಸಿದರಡ್ಡಿ ಮನೆತನದ ಶ್ರೀ ಶಂಕರೆಪ್ಪನವರು ಇವರು ಶಾಲೆಯ ಶಿಕ್ಷಣ ಪಡೆಯದೇ ಇದ್ದರೂ ರಂಗ ಕಲೆಯನ್ನು ಮೈಗೂಡಿಸಿಕೊಂಡವರು, ಇವರು ನಾಟಕದಲ್ಲಿ ಅಭಿನಯ ಮಾಡದಿದ್ದರೂ ನಾಟಕದಲ್ಲಿರುವ ಪಾತ್ರಗಳನ್ನು ಅವರವರ ದೇಹ ದಾರ್ಢ್ಯತೆಗೆ ತಕ್ಕಂತೆ ಮತ್ತು ಅವರ ಚಲನ ವಲನಗಳನ್ನು ಗಮನಿಸಿ ಪಾತ್ರ ಹಂಚುವುದರಲ್ಲಿ ವಿಖ್ಯಾತರು, ಇವರು ಪಾತ್ರಾಭಿನಯ ಕಲಿಸುವುದರಲ್ಲಿಯೂ ವಿಶೇಷವಾದ ಪರಿಣತಿ ಹೊಂದಿದ್ದರು.

ಇವರು ನೆರೆ ಪ್ರದೇಶಗಳಲ್ಲಿ ಕಂಡು ಬರುವ ನಾಟಕ ಮಂಡಳಿಗಳಾದ ಗರುಡ ಸದಾಶಿವ ರಾಯರ ಶ್ರೀ ದತ್ತಾತ್ರೇಯ ಸಂಗೀತ ನಾಟಕ ಮಂಡಳಿ ಮತ್ತು ಗಂಗೂಬಾಯಿ ಗುಳೇದಗುಡ್ಡ ರವರ ಶ್ರೀ ಕೃಷ್ಣ ಸಂಗೀತ ನಾಟಕ ಮಂಡಳಿ ಶಿವಬಸವಪ್ಪ ಬೆಳವಡಿಯವರ ಲೋಕಸೇವಾ ಸಂಗೀತ ನಾಟಕ ಮಂಡಳಿ ಹಾಗೂ ಶಾಂತ ವೀರಪ್ಪ ಚಂದೋಡಿ ರವರ ಶ್ರೀ ಗುರು ಬಿ. ಕೆ. ಆರ್. ಡ್ರಾಮಾ ಕಂಪನಿ, ಹೀಗೆ ಹಲವಾರು ನಾಟಕಕಾರರ ಸಂದರ್ಶನದಿಂದ ಜೊತೆಗೆ ಸಿನೆಮಾ ನೋಡುವ ಹವ್ಯಾಸ ಕೂಡ ಇದ್ದುದರಿಂದ ಶಂಕರೆಪ್ಪನವರು ಮಧುರಖಂಡಿಯಲ್ಲಿ ರಂಗ ಕಲೆಯ ಬೀಜ ಬಿತ್ತಿದರು. ಇವರು ಸುಮಾರು ೧೯೨೮ರಲ್ಲಿ ಶ್ರೀ ಕೃಷ್ಣ ಪಾರಿಜಾತ ನಾಟಕ ಮಾಡಿಸುವುದರೊಂದಿಗೆ ರಂಗ ಕಲೆಯನ್ನು ಪ್ರವೇಶಿಸಿದರು. ಅಂದರೆ ಸುಮಾರು ೧೮ ವರ್ಷಗಳ ವರೆಗೆ ತಮ್ಮ ಅಭಿನಯ ಕಲಿಸುವ ಕಲೆಯನ್ನು ನಾಟಕದ ಪಾತ್ರದಾರಿಗಳಿಗೆ ಧಾರೆಯರೆದರು, ಇವರು ಶ್ರೀ ಸಿದ್ದಗಿರಿ ಸ್ವಾಮಿಗಳಿಗೆ ಗುರುಗಳಾಗಿದ್ದರು. ಇವರು ನಾಟಕದಲ್ಲಿ ಯಾವ ರೀತಿಯಿಂದ ಅಭಿನಯ ಮಾಡಬೇಕು ಎಂಬುದರ ಬಗ್ಗೆ ತಾಲೀಮು ಕೊಡುತ್ತಿದ್ದರು. ಒಳ್ಳೆಯ ಮೈಕಟ್ಟು, ದುಂಡು ಮುಖ ವಿರುವ ಶ್ರೀ ಸಿದ್ದಗಿರಿ ಸ್ವಾಮಿಗಳಿಗೆ ಶ್ರೀ ಕೃಷ್ಣ ಪಾರಿಜಾತ ನಾಟಕದಲ್ಲಿ ಸತ್ಯಭಾಮ ಮತ್ತು ಕೊರವಂಜಿಯ ಪ್ರಮುಖ ಸ್ತ್ರೀ ಯ ಪಾತ್ರಗಳನ್ನು ನೀಡಿದರು. ಅವರ ಪ್ರತಿಭೆ ಗುರುತಿಸುವಲ್ಲಿ ಪ್ರಮುಖ ಪಾತ್ರ ವಹಿಸಿದರು.

ನಾಟಕದಲ್ಲಿ ಸತ್ಯಭಾಮ ಮತ್ತು ಕೊರವಂಜಿಯ ಪ್ರಮುಖ ಸ್ತ್ರೀ ಯ ಪಾತ್ರಗಳನ್ನು ನೀಡಿದರು. ಅವರ ಪ್ರತಿಭೆ ಗುರುತಿಸುವಲ್ಲಿ ಪ್ರಮುಖ ಪಾತ್ರ ವಹಿಸಿದರು.

## ೨.೪ ಜಮಖಂಡಿ ತಾಲೂಕಿನ ಮಧುರಖಂಡಿ ಗ್ರಾಮದ ಐತಿಹಾಸಿಕ ಹಿನ್ನೆಲೆ

ಮಧುರಖಂಡಿ ಗ್ರಾಮದ ಐತಿಹಾಸಿಕ ಹಿನ್ನಲೆ ತಿಳಿಯುವುದಕ್ಕಿಂತ ಪೂರ್ವದಲ್ಲಿ ಆ ಗ್ರಾಮದ ತಾಲೂಕಿನ ಐತಿಹಾಸಿಕ ಓನ್ನೆಲೆ ತಿಳಿದು ಕೊಳ್ಳುವುದು ಸೂಕ್ತ ವೆನಿಸುತ್ತದೆ. "ಜಮಖಂಡಿಯ ಇತಿಹಾಸವು ಸುಮಾರು ೧೦ನೇಯ ಶತಮಾನದ ಹಿಂದಿನದೆಂದು ಹೇಳಬಹುದು. ಇದರ ಪ್ರಥಮ ಉಲ್ಲೇಖವು ಕವಿಚಕ್ರವರ್ತಿ ರನ್ನನ ಅಜಿತನಾಥ ತೀರ್ಥಂಕರ ಪುರಾಣದ ೧೨ನೇ ಆಶ್ವಾಸದಲ್ಲಿದೆ. ರನ್ನ ಕವಿಯು ಜಮಖಂಡಿಯ ಬಗೆಗೆ

"ಬೆಳುಗಲಿ ಐನೂರರೊಳ್
ಅಗ್ಗಳವೆನಿಸುವ ಜಮಖಂಡಿ
ಎಪ್ಪತ್ತರ್ಕಳ್ ತಿಲಕಮನೆ
ನೆಗಳ್ದು..... ಮುದುಪೊಳಲೋಳ್ ಪುಟ್ಟಿ.
ಸುಪುತ್ರನೆನಿಸಿದಂ ಕವಿರನ್ನಂ[೩] ಎಂದಿದ್ದಾನೆ.

ಜಮಖಂಡಿ ಎಪ್ಪತ್ತರ ನಾಡಾದ 'ಮುದುಪೊಳಲ್' ತನ್ನ ಜನ್ಮಸ್ಥಾನವೆಂದು ರನ್ನ ಹೇಳಿಕೊಂಡಿದ್ದಾನೆ. ರನ್ನನ ಜನ್ಮ ಕ್ರಿ. ಶ. ೯೨೪ ರಿಂದ ೯೩ ರ ಆಸು ಪಾಸುನಲ್ಲಿಯದೆಂದು ಪಂಡಿತರ ಅಭಿಮತ. ಅವನ ಕಾಲಕ್ಕೆ ಜಮಖಂಡಿ ಒಂದು ಅಗ್ರಹಾರವೆನಿಸಿಕೊಂಡು ಅದರ ಆದೀನದಲ್ಲಿ ಎಪ್ಪತ್ತು ಹಳ್ಳಿಗಳಿರಬೇಕೆಂದರೆ ಅದು ಸುಮಾರು ಏಳು ಅಥವಾ ಎಂಟನೇ ಶತಮಾನದಲ್ಲಿಯೇ ಪ್ರವರ್ಧಮಾನಕ್ಕೆ ಬಂದು ಒಂದು ಪಟ್ಟಣವಾಗಿರಬೇಕು. ಈ ಹಿನ್ನೆಲೆಯಲ್ಲಿ ನಗರದ ಪ್ರಾಚೀನತೆ ಒಂದು ಸಹಸ್ರ ವರ್ಷಕ್ಕೂ ಮಿಕ್ಕಿದ್ದಾಗಿದೆ.

ಅದರಂತೆ "ಗೋಕಾಕ ತಾಮ್ರ ಶಾಸನದಲ್ಲಿ ಜಮಖಂಡಿಯು ಎಪ್ಪತ್ತರ ಹಳ್ಳಿಯೆಂದು ಅದರ ಸಮೀಪದಲ್ಲಿದ್ದ ಮಧುರಖಂಡಿ ಗ್ರಾಮದ ಉಲ್ಲೇಖವು ಇದೆ.

ಹಳೆಯ ಶಾಸನಗಳಲ್ಲಿ ಜಮಖಂಡಿಯನ್ನು ಜಂಬುಖಂಡಿ ಎಂದು ಕರೆಯಲಾಗಿದೆ ಅದರಂತೆ 12ನೇ ಶತಮಾನದ ಕಡಕೋಳ ಶಿಲಾ ಲೇಖದಲ್ಲಿಯು ಸಹ ಜಮಖಂಡಿಯ ಉಲ್ಲೇಖವು 'ಜಂಬುಖಂಡಿ' ಎಂದೇ ಮಾಡಲಾಗಿದೆ ಜಮಖಂಡಿ ತಾಲೂಕಿನ ಕೊಣ್ಣೂರಿನ ಕ್ರಿ. ಶ. ೧೧೮೫ರ ಶಾಸನ ಕಲ್ಯಾಣ ಚಾಲುಕ್ಯರ ೬ನೇ ವಿಕ್ರಮಾದಿತ್ಯನ ಕಾಲಕ್ಕೆ ಸೇರಿದ ಶಾಸನ ಶಿರೋಳ ಗ್ರಾಮದ ಬಿಜ್ಜಳನ ಕಾಲದ ಶಾಸನ ಜಮಖಂಡಿಯ ಓಲೆಪ್ಪನ ಮಠದ ಕ್ರಿ. ಶ. ೧೦೮೨ ಶಾಸನಗಳಲ್ಲಿ ಈ ಊರನ್ನು ಜಮಖಂಡಿ ಎಂದೇ ಕರೆದಿದ್ದರೆ.

ಜಮಖಂಡಿಯಲ್ಲಿ 'ಜಂಬುಕೇಶ್ವರ' ನೆಂಬ ಪ್ರಾಚೀನ ದೇವಾಲಯವಿದೆ. ಈ ಜಂಬಕೇಶ್ವರನಿಂದ ಈ ಗ್ರಾಮಕ್ಕೆ ಜಂಬುಖಂಡಿ ಎಂಬ ಹೆಸರು ಬಂದಿರಬಹುದೆಂದು ಊಹಿಸಬಹುದು. ಜಂಬುಕಗಳನೆಲೆ ಜಂಬುಖಂಡಿ ಜಂಬುಕಗಳ ವಾಸಸ್ಥಾನದಲ್ಲಿರುವ ಈಶ್ವರ ಜಂಬುಕೇಶ್ವರ.[೪]

ಈ ಜಮಖಂಡಿಯಂತೆಯೇ ಜಮಖಂಡಿಯ ಸಮೀಪದಲ್ಲಿರುವ ಮಧುರಖಂಡಿ ಗ್ರಾಮವು ಅನೇಕ ರೀತಿಯ ಊಹೆಗಳಿಂದ ಕೂಡಿದೆ.

೧] ಮಧುರಖಂಡಿಯಲ್ಲಿ ಮಧುರಖಂಡೇಶ್ವರನೆಂಬ ಪುರಾತನ ಈಶ್ವರದೇವಾಲಯವಿದೆ ಆ ಊರಿಗೆ ಈ ಮಧುರಖಂಡೇಶ್ವರ ನಿಂದಲೇ ಮದುರಖಂಡಿ ಎಂಬ ಹೆಸರು ಬಂದಿತೆಂದು ಹೇಳುತ್ತಾರೆ.

೨] ಮಧುರಖಂಡಿಯ ಪೂರ್ವನಾಮ ಮದರಖಂಡಿ ಎಂದು ಇತ್ತು. ಮಧುರಖಂಡಿಯಲ್ಲಿ ಸಿದ್ದಗಿರಿ ಮಹಾಸ್ವಾಮಿಗಳು ಶ್ರೀಮನ್ನಿಜಗುಣ ಶಿವವಯೋಗಿಗಳ ಮಂದಿರದ ಉದ್ಘಾಟನೆಯ ನಿಮಿತ್ಯ ಹುಲ್ಯಾಳದ ಶ್ರೀ ಶ್ರೀ ಶ್ರೀ ಶಂಭುಲಿಂಗ ಶಿವಾಚಾರ್ಯರು ಆಗಮಿಸಿದ ಸಂದರ್ಭಧಲ್ಲಿ ಮಧುರಖಂಡಿಯಲ್ಲಿರುವ ಒಳ್ಳೆಯ ಕಲಾವಿದರನ್ನು ಹಾಗೂ ಸುತ್ತಲೂ ತೆಂಗು, ಬಾಳೆ, ಮಾವು, ಹುಣಸೆ. ಈ ಸುಂದರ ತಾಣದಲ್ಲಿ ನವಿಲುಗಳು ಗರಿಗೆದರಿ ಕುಣಿಯುವ ದೃಶ್ಯ ನೋಡಿ ಇಲ್ಲಿ ಏನು ಕಡಿಮೆ ಇದೆ ಎಂದು ಮದರಖಂಡಿಯನ್ನು ಮಧುರಖಂಡಿ ಎಂದು ಕರೆದರು ಅಂದಿನಿಂದ

ಮಧುರಖಂಡಿ ಎಂಬ ಹೆಸರು ಬಳಕೆಯಲ್ಲಿ ಬಂದಿತು. ಎಂಬ ವಿವರವು ಅಲಿಯ ಜನಪದರಿಂದ ತಿಳಿದು ಬರುತ್ತದೆ.

ಹೀಗೆ ಹಲವಾರು ಶಾಸನಗಳ ಆಧಾರದ ಮೂಲಕ ಮತ್ತು ಅಲ್ಲಿರುವ ಪುರಾತನ ದೇವಾಲಯಗಳಿಂದ ಜಮಖಂಡಿ ತಾಲೂಕಿನ ಮಧುರಖಂಡಿ ಗ್ರಾಮದ ನಾಮ ವಿವೇಚನೆ ಮತ್ತು ಹಿನ್ನೆಲೆಯನ್ನು ಗುರುತಿಸಬಹುದು.

**ಟಿಪ್ಪಣಿ :**

೧) ರಾಮಕೃಷ್ಣ ಮರಾಠೆ : ಕರ್ನಾಟಕ ವೃತ್ತಿ ರಂಗಭೂಮಿ ಪುಟ-೧೦ .

೨) ಅದೇ : ಪುಟ-೧೩೬

೩) ಪ್ರೊ. ಎಸ್. ಬಿ. ಮಟೋಳ್ಳಿ : ಜಮಖಂಡಿ ಇತಿಯಾಸದ ಪನ. ಪುಟ-೧೭

೪) ಅದೇ : ಪುಟ -೧೮

# ಅಧ್ಯಾಯ : ೩

## ಶ್ರೀ ಸಿದ್ಧಗಿರಿ ಸ್ವಾಮಿಗಳ ರಂಗ ಪರಿಸರ

## ಅಧ್ಯಾಯ – ೩

## ಶ್ರೀ ಸಿದ್ಧಗಿರಿ ಸ್ವಾಮಿಗಳ ರಂಗ ಪರಿಸರ

### ೩.೧ ಶ್ರೀ ಸಿದ್ದಗಿರಿ ಸ್ವಾಮಿಗಳ ಜೀವನ

ಬಹುಮುಖ ಪ್ರತಿಭೆಯ ಕಲಾವಿಧರಾದ ಶ್ರೀ ಸಿದ್ದಗಿರಿ ಸ್ವಾಮಿಗಳು ಬಾಗಲಕೋಟ ಜಿಲ್ಲೆಯ ಜಮಖಂಡಿ ತಾಲೂಕಿನ ಮಧುರಖಂಡಿ ಗ್ರಾಮದವರು. ಇವರ ತಂದೆ ಈರಯ್ಯ ಇವರೂ ಸಹ ಶ್ಯಾವರ್ಕಿ ಪದ ಹಾಡುವುದನ್ನು ಹಾಗೂ ತಾಳ ಬಾರಿಸುವ ಕಲೆಯನ್ನು ಮೈಗೂಡಿಸಿಕೊಂಡಿದ್ದರು. ತಾಯಿ ಶಿವಗಂಗವ್ವಾ ಎಂಬ ಶರಣೆ ಈ ದಂಪತಿಗಳ ಉದರದಲ್ಲಿ ೧೬-೦೮-೧೯೨೦ರಲ್ಲಿ ಸಿದ್ದಗಿರಿ ಸ್ವಾಮಿಗಳು ಜನ್ಮ ಪಡೆದು ಬಂದರು. ಇವರ ಕಾವ್ಯ ನಾಮ 'ಶ್ರೀ ಗಿರೀಶ' ಇವರು ತಮ್ಮ ಹುಟ್ಟೂರಾದ ಮಧುರಖಂಡಿಯಲ್ಲಿ ಕೇವಲ ನಾಲ್ಕನೇ (೪) ತರಗತಿಯ ವರೆಗೆ ಶಿಕ್ಷಣ ಪಡೆದುಕೊಂಡರು, ಉನ್ನತ ಶಿಕ್ಷಣ ಪಡೆದುಕೊಂಡವರನ್ನು ಬೆರಗುಗೊಳಿಸುವಂತಹ ಪಾಂಡಿತ್ಯವನ್ನು ಪಡೆದಿದ್ದರು.

ಇವರು ಬಾಲ್ಯದಿಂದಲೇ ತತ್ವಜ್ಞಾನದ ಬಗ್ಗೆ ಬಹಳ ಅಸಕ್ತಿ ಹೊಂದಿದ್ದರು, ಅಂತಲೇ ಇವರು ನಿಜಗುಣ ಶಿವಯೋಗಿಗಳ ಆದ್ಯಾತ್ಮದ ಜ್ಞಾನ ಮಂದಿರ ಹುನ್ನೂರದಲ್ಲಿ ಶ್ರೀ ಶಿವಪ್ಪಜ್ಜನ ಗರಡಿಯಲ್ಲಿ ಕೆಲಸ ಕಾರ್ಯಗಳನ್ನು ಮಾಡುತ್ತಿದ್ದರು. ಇವರು ಬಹಳ ಕ್ರಿಯಾಶೀಲರಾಗಿದ್ದರು. ಇವರ ಕಾರ್ಯ ವೈಖರಿಯನ್ನು ಕಂಡು ಶ್ರೀ ಶ್ರೀ ಶ್ರೀ ಶಂಭುಲಿಂಗ ಶಿವಾಚಾರ್ಯರು ಪ್ರಚಂಡ ಜ್ಞಾನ ಮೂರ್ತಿ ಎಂದು ಕರೆಯುತ್ತಿದ್ದರು. ಇವರು ಚಿಕ್ಕವಯಸ್ಸಿನಲ್ಲಿಯೇ ನಾಟಕದಲ್ಲಿ ಅಭಿನಯಿಸುತ್ತಿದ್ದರು, ತಾಳ ಹಾಗೂ ಚರ್ಮವಾದ್ಯ ಬಾರಿಸುವ ಕಲೆಯೆಂತು ವಿಶೇಷವಾಗಿತ್ತು.

### ಇವರಿಗೆ ದೊರೆತ ಬಿರುದುಗಳು

* ವೇದಾಂತ ಕೇಸರಿ

* ವೇದಾಂತ ಮೂರ್ತಿ

* ಪ್ರಚಂಡ ಜ್ಞಾನ ಮೂರ್ತಿ

ಇವರು ಬರೆದ ಕೃತಿಗಳು

* ಗಿರೀಶ ಗೀತೆ ಶತಕ

* ದೃಷ್ಟಾಂತ ದೀಪ್ತಿ

* ಮಂಗಲ ಗೀತೆ

* ಶ್ರೀ ಸಿದ್ದಲಿಂಗೇಶ್ವರ ಸ್ತುತ.

ದ್ವನಿ ಸುರುಳಿಗಳು.

* ಕೈವಲ್ಯ ಸುಧ

* ತೇರುಸಾಗಿತಮ್ಮಾ

* ಸಂಸಾರದೋಳು ಸುಖವಿಲ್ಲ

(ನಾಟಕ ಪ್ರಯೋಗದ ಸಂದರ್ಭದಲ್ಲಿ ಮತ್ತು ಭಜನೆ ಮಾಡುವ ಸಂದರ್ಭದಲ್ಲಿ ರೂಪಗೊಂಡ ದ್ವನಿ ಸುರುಳಿಗಳು ಇವು)

## ೩.೨ ಶ್ರೀ ಸಿದ್ದಗಿರಿ ಸ್ವಾಮಿಗಳ ಮನೆತನದಲ್ಲಿ ರಂಗ ಕಲೆಗೆ ತೊಡಗಿಕೊಂಡವರ ವಿವರಗಳು

೧] **ಚನಮಲ್ಲಯ್ಯ :** ಇವರಿಬ್ಬರು
೨] **ಬಸಪ್ರಭಯ್ಯ :** ಲಾವಣಿ ಪದ ಹಾಗೂ ಗೀಗಿಪದ ಹಾಡುವ ಕಲೆಯಲ್ಲಿ ಪರಿಣಿತರು.

೩] **ಮಲ್ಲಯ್ಯ :** ಸಂಪೂರ್ಣ ಹೇಮರಡ್ಡಿ ಮಲ್ಲಮ್ಮನ ನಾಟಕದಲ್ಲಿ ಬಸಮ್ಮನ ಸ್ತ್ರೀ ಪಾತ್ರವನ್ನು ಶ್ರೀ ಮಲ್ಲಯ್ಯನವರು ಸುಂದರವಾಗಿ ಅಭಿನಯಿಸುತ್ತಿದ್ದರು. ಹಾಗೂ ಪುರಾಣ, ಪ್ರವಚನ ಹೇಳುವ ವಿಶಿಷ್ಟ ಕಲೆಯನ್ನು ಹೊಂದಿದ್ದರು. ಈ ಮೂವರು ಸಿದ್ಧಗಿರಿ ಸ್ವಾಮಿಗಳವರ ಸಹೋದರರು.

೪] ನೀಲವ್ವಾ
೫] ಗುರುಸಿದ್ದವ್ವಾ
೬] ರಾಚವ್ವಾ
೭] ಬೌರವ್ವಾ
೮] ಪಾರ್ವತೇವ್ವಾ

→ ಇವರೂ ಸಹ ಬೀಸುವ, ಹಾಗೂ ಕುಟ್ಟುವಪದಗಳನ್ನು ಶೋಭಾನಪದಗಳನ್ನು ಬಹಳ ಸೊಗಸಾಗಿ ಹಾಡುತ್ತಿದ್ದರು. ಇವರು ಸಿದ್ದಗಿರಿ ಸ್ವಾಮಿಗಳ ಸಹೋದರಿಯರು.

**ಸಿದ್ದಗಿರಿ ಸ್ವಾಮಿಗಳಿಗೆ ಏಳುಜನ ಮಕ್ಕಳು ಅವರ ಹೆಸರುಗಳು ಮತ್ತು ವೃತ್ತಿಗಳು ಹೀಗಿವೆ.**

೧] **ಗಿರಿಮಲ್ಲಯ್ಯ :** (ಮಗ) ಇವರು ಆರ್.ವ್ಹಿ. ಆರ್. ಸಂಯುಕ್ತ ಪ.ಪೂ ಮಹಾವಿಧ್ಯಾಲಯ ರಾಯಬಾಗದಲ್ಲಿ ಕನ್ನಡ ವಿಷಯದಲ್ಲಿ ಪ್ರಾಧ್ಯಾಪಕರಾಗಿ ಕಾರ್ಯನಿರ್ವಹಿಸಿ ಈಗ ನಿವೃತ್ತಿ ಹೊಂದಿದ್ದಾರೆ. ಇವರೂ ಸಹ ಬಾಲ್ಯದಿಂದಲು ಸಾಹಿತ್ಯಾಸಕ್ತಿ ಬೆಳೆಸಿಕೊಂಡಿದ್ದರು. ಇವರು ತಬಲಾ, ತಂಬೂರಿ, ತ್ರಿಬಲ್ ಸಟ್, ಚರ್ಮವಾದ್ಯ ಬಾರಿಸುವ ಕಲೆ ಹಾಗೂ ತಾಳ ಬಾರಿಸುವುದರಲ್ಲಿ ವಿಶೇಷ ಪರಿಣಿತಿ ಪಡೆದವರು. ಸುಮದುರವಾದ ಪದಕಟ್ಟಿ ಹಾಡುವುದರಲ್ಲಿ ಎತ್ತಿದಕೈ ಮತ್ತು ಒಳ್ಳೆಯ ಮಾತುಗಾರರೆಂಬ ಹೆಸರನ್ನು ಪಡೆದಿದ್ದಾರೆ.

೨] **ಗುರುಸಿದ್ದವ್ವಾ :** (ಮಗಳು) ಇವರು ಸೋಬಾನ ಪದಗಳನ್ನು ಹಾಡುತ್ತಿದ್ದರೆಂದು ತಿಳಿದು ಬರುತ್ತದೆ. ಒಮ್ಮೆ ಮಾಹಾಲಿಂಗಪೂರದಲ್ಲಿ ಶ್ರೀ ಸಿದ್ದಗಿರಿ ಸ್ವಾಮಿಗಳು ಭಜನಾ ಕಾರ್ಯಕ್ರಮಕ್ಕೆ ಹೋಗಿ ಪದಗಳನ್ನು ಹಾಡುವಾಗ ಸುಮಾರು ರಾತ್ರಿ ೧೨ ಗಂಟೆಗೆ ತಮ್ಮ ಸುಪುತ್ರಿಯಾದ ಗುರುಸಿದ್ದವ್ವಾ ಮೃತಪಟ್ಟ ಸುದ್ದಿಯನ್ನು ಕೇಳಿಯೂ ನಿರ್ವಿಕಾರವಾಗಿಯೇ ಭಜನೆ ಸಾಗಿಸಿದರು, ಇದುವೇ ಸ್ವಾಮಿಗಳ ಮೋಹ ರಹಿತ ಬಾಳಿನ ಸಂದೇಶವಾಗಿದೆ.

೩] **ಕಲ್ಲಯ್ಯ :** (ಮಗ) ಇವರು ನಾಟಕದಲ್ಲಿ ಹಿನ್ನಲೆ ಗಾಯಕರು, ತಾಳವಾದಕರು, ಇವರು ಮಲ್ಲಮ್ಮನ ನಾಟಕದಲ್ಲಿ ಹಿನ್ನಲೆ ಗಾಯಕರಾಗಿದ್ದರು. ಇವರ ಕಲೆ ಮೆಚ್ಚಿ ಗೌರವಿಸಿ ಇಂದಿಗೂ ಕರ್ನಾಟಕ ಸರ್ಕಾರ ಮಾಸಾಶನ ಕೊಡುತ್ತಿದೆ.

೪] **ಪಾರ್ವತಿ :** (ಮಗಳು) ಇವರು ಉತ್ತಮ ಹಾಡುಗಾರ್ತಿಯಾಗಿದ್ದಾರೆ. ಊರಲ್ಲಿ ನಡೆಯುವ ಪೂಜೆಯ ಕಾರ್ಯಕ್ರಮದ್ದಲ್ಲಿ ಮಂಗಳಾರುತಿಪದ ಹಾಡುವ ಕಲೆ ಹೊಂದಿದ್ದಾರೆ.

೫] **ಬಸಮ್ಮ :** (ಮಗಳು) ಉತ್ತಮ ಹಾಡುಗಾರ್ತಿಯಂದು ಪ್ರಸಿಧ್ಧಿ ಪಡೆದಿದ್ದಾರೆ.

೬] ಶಂಕ್ರಯ್ಯ : ಇವರು ತಬಲಾವಾದಕರು ಹಾಗೂ ತಾಳಬಾರಿಸುವ ಕಲೆಯನ್ನು
(ಮಗ) ಹೊಂದಿದ್ದರು

೭] ನಿಜಗುಣಯ್ಯ : ಇವರು ಜೆ. ಎಸ್. ಜಮಖಂಡಿ ಶುಗರ್ ವರ್ಕ್ಸ ಲಿಮಿಟೆಡ್‌ದಲ್ಲಿ
(ಮಗ) ತೂಕ ಮಾಡುವ ಕ್ಲಾರ್ಕ ಕೆಲಸ ಮಾಡುತ್ತಿದ್ದಾರೆ, ಇವರು ಏಕಾಂಕ ನಾಟಕದಲ್ಲಿ ಪ್ರಮುಖ ಪಾತ್ರ ಮಾಡುತ್ತಿದ್ದರು ಅಣ್ಣ-ತಂಗಿ ಸಮಾಜಕ್ಕೆ ಕಣ್ಣಿಲ್ಲ ಎಂಬ ಹವ್ಯಾಸಿ ನಾಟಕದಲ್ಲಿ ಉತ್ತಮ ಅಭಿನಯ ನೀಡಿದ್ದಾರೆಂದು ಜನ ಈಗಲೂ ಗುರುತಿಸುತ್ತಾರೆ.

೩) ಸಿದ್ದಗಿರಿ ಸ್ವಾಮಿಗಳ ಅಣ್ಣನಾದ ಬಸಪ್ರಭಯ್ಯನ ಮೂರುಜನ ಮಕ್ಕಳು.

೧] ಚನಮಲ್ಲಯ್ಯ ಬಸಪ್ರಬಯ್ಯ ಮಠಪತಿ : ಇವರು ಯಾವುದೇ ನಾಟಕ ವಿರಲಿ,
ಉದಾ:- ಪೌರಾಣಿಕ, ಸಾಮಾಜಿಕ, ಬೈಲಾಟ, ಹವ್ಯಾಸಿ ನಾಟಕಗಳಲ್ಲಿ ಹಾರ್ಮೋನಿಯಂ ಬಾರಿಸುವ ಕಲೆಯಲ್ಲಿ ಪ್ರಸಿಧ್ಧಿ ಹೊಂದಿದ್ದಾರೆ. ಇವರ ಪ್ರತಿಭೆಯನ್ನು ಕಂಡು ಕರ್ನಾಟಕ ಸರ್ಕಾರ ಮಾಸಾಶನ ಕೊಡುತ್ತದೆ. ಇವರಿಗೆ ಮೂರು ಜನ ಮಕ್ಕಳಿದ್ದಾರೆ. ಅವರು

೧] ಶ್ರೀಶೈಲ : ಇವರು ಕಂಡೆಕ್ಟರ್ ವೃತ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಸಂಪೂರ್ಣ ಹೇಮರಡ್ಡಿ ಮಲ್ಲಮ್ಮನ ನಾಟಕದಲ್ಲಿ ಮಲ್ಲಮ್ಮನ ಪ್ರಮುಖ ಸ್ತ್ರೀ ಪಾತ್ರ ಮಾಡುತ್ತಾರೆ. ಹಾಗೂ ಹಾರ್ಮೋನಿಯಂ ಬಾರಿಸುವ ನೈಪುಣ್ಯ ಹೊಂದಿದ್ದಾರೆ. ಮತ್ತು ಮುಖ್ಯ ಗಾಯಕರಾಗಿ ಪದಕಟ್ಟಿ ಹಾಡುವ ಪ್ರತಿಭೆ ಉಂಟು.

೨] **ಮಹಾಲಿಂಗಯ್ಯ :** ಇವರು ಪ್ರಸಿದ್ದ ತಬಲಾ ವಾದಕರು ಇವರಿಗೆ ಉತ್ತರ ಕರ್ನಾಟಕದಲ್ಲಿ ಶ್ರೇಷ್ಟ ತಬಲಾ ವಾದಕರು ಎಂದು ಇಂಚಲದ ಶ್ರೀ.ಶ್ರೀ.ಶ್ರೀ. ಶಿವಾನಂದ ಭಾರತಿ ಮಹಾಸ್ವಾಮಿಗಳು ತಬಲಾ ಮಾಂತ್ರಿಕ ಬಿರುದು ನೀಡಿ ಗೌರವಿಸಿದರು.

೩] **ಮಲ್ಲಯ್ಯ :** ಇವರು ಸಹ ಸಂಪೂರ್ಣ ಹೇಮರಡ್ಡಿ ಮಲ್ಲಮ್ಮನ ನಾಟಕದಲ್ಲಿ ಮತ್ತು ಭಜನೆಯಲ್ಲಿ ಹಾರ್ಮೋನಿಯಂ ಬಾರಿಸುವ ಪ್ರತಿಭೆ ಹೊಂದಿದ್ದಾರೆ.

೪] **ದುಂಡಯ್ಯ :** ಇವರು ಹುನಗುಂದ ಮಹಾವಿದ್ಯಾಲಯದಲ್ಲಿ ಬೌತಶಾಸ್ತ್ರ ವಿಭಾಗದ ಪ್ರಾದ್ಯಾಪಕರಾಗಿ ಸೇವೆ ಸಲ್ಲಿಸುತ್ತಿದ್ದರು. ಇವರು ಹಾಡುವ ಕಲೆ ಹೊಂದಿದ್ದಾರೆ.

೫] **ಈರಯ್ಯ :** ಇವರು ಬೆಂಗಳೂರು ನೆಹರು ವಿದ್ಯಾಲಯ ಸ್ಮಾರಕ ಕೇಂದ್ರದಲ್ಲಿ ಮಾದ್ಯಮಿಕ ಶಾಲೆಯ ಶಿಕ್ಷಕರಾಗಿ ಕಾರ್ಯನಿರ್ವಹಿಸಿ ಈಗ ನಿರ್ವತ್ತಿ ಹೊಂದಿದ್ದಾರೆ. ಇವರು ಸಹ ಶ್ರೇಷ್ಟ ತಬಲಾ ವಾದಕರು.

**ಸಿದ್ದಗಿರಿ ಸ್ವಾಮಿಗಳ ತಮ್ಮನಾದ ಮಲ್ಲಯ್ಯ ಇವರಿಗೆ ಮೂರು ಜನ ಮಕ್ಕಳು**

೧] **ಷಣ್ಮುಕಯ್ಯ :** ಇವರು ಶ್ರೇಷ್ಟ ತಬಲಾ ವಾದಕರು.

೨] **ಸಂಗಯ್ಯ :** ಇವರು ಮಲ್ಲಮ್ಮನ ನಾಟಕದಲ್ಲಿ ಭರಮರಡ್ಡಿ

೩] **ಶಂಭುಲಿಂಗಯ್ಯ :** ಇವರು ನಂದಿ ಶುಗರ್ಸ್ ಲಿಮಿಟೆಡ್‌ದಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು ಸಹ ಒಳ್ಳೆಯ ತಬಲಾ ವಾದಕರೆಂದು ಹೆಸರು ಪಡೆದಿದ್ದಾರೆ.

ಹೀಗೆ ವಂಶಾವಳಿಯ ಸಮಗ್ರಮಾಹಿತಿಯನ್ನು ಅವರ ಕುಟುಂಬದವರಿಂದ ಹಾಗೂ ಅವರ ಅಭಿಮಾನಿಗಳಿಂದ ಕೇಳಿ ತಿಳಿಯಲಾಯಿತು.

ತಮ್ಮ ಮನೆಯಲ್ಲಿ ರಂಗಪರಂಪರೆಯು ನಿರ್ಮಾಣಗೊಳ್ಳಲು ಸಿದ್ದಗಿರಿ ಸ್ವಾಮಿಗಳು ನಿರಂತರವಾಗಿ ಪ್ರಯತ್ನಿಸಿದರು. ಜೊತೆಗೆ ಊರಲ್ಲಿಯೂ ಸಹ ಪಸರಿಸುವಂತೆ ನೋಡಿಕೊಂಡರು. ಈ ಮಖಾಂತರ ಉತ್ತರ ಕರ್ನಾಟಕದ ರಂಗಭೂಮಿಗೆ ಜೀವಕಳೆ ತುಂಬಿದರು.

---

ಶ್ರೀ ಸಿದ್ದಗಿರಿ ಸ್ವಾಮಿಗಳ ಕುಟುಂಬದವರಿಂದ ಹಾಗೂ ಅದೇ ಗ್ರಾಮದ ಪ್ರೇಕ್ಷಕರಿಂದ ಮಾಹಿತಿ ಪಡೆಯಲಾಯಿತು.

## ಶ್ರೀ ಸಿದ್ದಗಿರಿ ಸ್ವಾಮಿಗಳ ಮನೆತನದಲ್ಲಿ ರಂಗಕಲೆಗೆ ತೊಡಗಿಕೊಂಡವರ ವಿವರಗಳು

**ಈರಯ್ಯ ತಂದೆ**

**ಶಿವಗಂಗವ್ವಾ ತಾಯಿ**



## ೩.೩ ಶ್ರೀ ಸಿದ್ದಗಿರಿ ಸ್ವಾಮಿಗಳ ರಂಗ ಪ್ರವೇಶ

ಶ್ರೀ ಶಂಕರೆಪ್ಪನವರಿಂದ ರಂಗ ಕಲೆಯನ್ನು ಕಲಿತ ಶ್ರೀ ಸಿದ್ದಗಿರಿ ಸ್ವಾಮಿಗಳು, ನಾಟಕದಲ್ಲಿ ಪಾತ್ರಭಿನಯಮಾಡುವುದರೊಂದಿಗೆ ಕಲಾರಂಗವನ್ನು ಪ್ರವೇಶಿಸಿದರು. ಇವರ ಪ್ರಥಮ ಪ್ರಯೋಗ ಶ್ರೀಕೃಷ್ಣ ಪಾರಿಜಾತ. ಇದನ್ನು ೧೯೨೬ ರಿಂದ ೩೧ರ ವರೆಗೆ ಶ್ರೀಕೃಷ್ಣ ಪಾರಿಜಾತ ಕಂಪನಿ ಮಧುರಖಂಡಿಯ ಮೂಲಕ ಪ್ರದರ್ಶಿಸಿದರು. ಈ ನಾಟಕದಲ್ಲಿ ಪ್ರಮುಖ ಸ್ತ್ರೀ ಪಾತ್ರಗಳಾದ ಸತ್ಯಭಾಮೆ, ಕೊರವಂಜಿ ಪಾತ್ರದಲ್ಲಿ ಅಭಿನಯಿಸಿದರು. ಮುಂದೆ ಇವರ ಕಲಾನೈಪುಣ್ಯತೆ ಕಂಡು ಶ್ರೀ ಕೃಷ್ಣ ಪಾರಿಜಾತ ಕಂಪನಿ ಜಮಖಂಡಿಯವರು, ಆಹ್ವಾನ ನೀಡಿದರು ಅಲ್ಲಿ ಶ್ರೀ ಕೃಷ್ಣ ಪಾರಿಜಾತ ನಾಟಕದಲ್ಲಿ ೧೯೩೧ ರಿಂದ ೩೭ರ ವರೆಗೆ ಶ್ರೀ ಸಿದ್ದಗಿರಿ ಸ್ವಾಮಿಗಳು ಅದ್ದೂರಿಯ ಪ್ರದರ್ಶನ ಮಾಡಿದರು. ಅಷ್ಟೇ ಅಲ್ಲದೆ ಇವರು ತಮ್ಮ ಸ್ವರ ಕಡಿಮೆಯಾದ ಮೇಲೆ ನಾನೇ ಏಕೆ ಒಂದು ನಾಟಕ ಕಂಪನಿ ಕಟ್ಟಬಾರದು ಎಂದು ಮನಗಂಡ ಶ್ರೀ ಸಿದ್ದಗಿರಿ ಸ್ವಾಮಿಗಳು ಮಧುರಖಂಡಿಯಲ್ಲಿ ಶ್ರೀ ಮಲ್ಲಕಾರ್ಜುನ ಪ್ರಾಸಾದಿಕ ನಾಟ್ಯ ಸಂಘವನ್ನು ಕಟ್ಟಿ ೧೯೩೭ ರಿಂದ ೧೯೬೭ರ ವರೆಗೆ ಸಂಪೂರ್ಣ ಹೇಮರಡ್ಡಿ ಮಲ್ಲಮ್ಮ ಎಂಬ ಸಣ್ಣ ನಾಟಕವಾಡಿ ತಮ್ಮ ಪ್ರತಿಭೆಯನ್ನು ಮೆರೆದರು.

ತದನಂತರದಲ್ಲಿ ಇವರು ಇತರರ ನಾಟಕ ಕಂಪನಿಯಲ್ಲಿ ತಮ್ಮ ಪ್ರತಿಭೆಯನ್ನು ಪ್ರದರ್ಶಿಸಿದರು. ಆ ನಾಟಕಗಳು ೧೯೫೫ರಲ್ಲಿ 'ಶಿವಶರಣೆ ನೆಲ್ಲೂರ ನಿಂಬೆಕ್ಕ' ಶ್ರೀ ಮಲ್ಲಿಕಾರ್ಜುನ ನಾಟ್ಯ ಸಂಘ ಮಧುರಖಂಡಿ, ೧೯೬೭ರಲ್ಲಿ 'ಶ್ರೀ ರಾಮ ಪಾದುಕಾ ಪಟ್ಟಾಭಿಷೇಕ' ಭಾರತ ನಾಟ್ಯ ಸಂಘ ಹುನ್ನೂರ, ೧೯೬೪ರಲ್ಲಿ 'ಅಣ್ಣ–ತಮ್ಮ' ಶ್ರೀ ಮಲ್ಲಿಕಾರ್ಜುನ ನಾಟ್ಯ ಸಂಘ ಜಮಖಂಡಿ. ೧೯೫೫ರಲ್ಲಿ 'ಕುರುಕ್ಷೇತ್ರ' ಶ್ರೀ ಮಲ್ಲಿಕಾರ್ಜುನ ನಾಟ್ಯ ಸಂಘ ಜಮಖಂಡಿ. ೧೯೭೯ರಲ್ಲಿ 'ಚಿತ್ರಾಂಗದಾ' ಶ್ರೀ ಮಲ್ಲಿಕಾರ್ಜುನ ನಾಟ್ಯ ಸಂಘ ಜಮಖಂಡಿ. ಇವರಿಂದಲೇ ಸ್ಥಾಪಿಸಲ್ಪಟ್ಟ ಮತ್ತು ನಿರ್ದೇಶಿಸಲ್ಪಟ್ಟ ಎರಡು ನಾಟಕಗಳೆಂದರೆ – ಸಂಪೂರ್ಣ ಹೇಮರಡ್ಡಿ ಮಲ್ಲಮ್ಮ ಶ್ರೀ ಮಲ್ಲಿಕಾರ್ಜುನ ಪ್ರಾಸಾದಿಕ ನಾಟ್ಯ ಸಂಘ ಮಧುರಖಂಡಿ ಹಾಗೂ ಶಿವಶರಣೆ ನೆಲ್ಲೂರ

ನಾವು ಯಾವುದೇ ಕೆಲಸ ಮಾಡಲಿ ದೇವರ ಸ್ತೋತ್ರದೊಂದಿಗೆ ಪ್ರಾರಂಭಿಸುತ್ತೇವೆ. ಯಾಕೆಂದರೆ ನಮ್ಮ ಕೆಲಸ ಯಶಸ್ವಿಯಾಗಿ ನೆರವೇರಲಿ ಎಂದು. ಅದು ನಮ್ಮ ಭಾರತೀಯರ ಸಂಪ್ರದಾಯ. ಅಂತಲೆ ಈ ನಾಟಕಕಾರರು ದೇವರ ಪ್ರಾಥನೆ ಮಾಡುವುದರೊಂದಿಗೆ ನಾಟಕ ಪ್ರಾರಂಭಿಸುತ್ತಿದ್ದರು. ಈ ರೀತಿ ಇದೆ.

**ನಾಂದಿ** ರಾಗ (ಹಮೀರ)

ಪಾಲಿಸೋ ಪರಮೇಶಾ ಗಿರಿವಾಶಾ
ಪಾಲಿಸೋ ಪರಮೇಶಾ .
ಬಹು ಪ್ರಖ್ಯಾತ ಶ್ರೀಶೈಲೇಶಾ॥ ಪಾಲಿಸೋ ಪರಮೇಶಾ ॥
ಸುಗುಣ ಶಾಂತ ಸುರವಂದಿತನೆ॥ ಪಾಲಿಸೋ ॥

ಸುಭಕರಾ ಶಿವ ಮಲ್ಲಿಕಾರ್ಜುನನು ಅಗಣಾ ಶ್ರೀಶೈಲನಾಥ
ಪೊರೆಯೊ ವರದಾಂತ ಶಾಂತಿಮನಾ ॥ ಶುಭಕರಾ
ಪರಮ ಕರುಣ ಗಿರಿವರ ಪಾವನ ಸುರವಂದಿತನೆ
ಲಿಂಗಲೀಣ ॥ ಸುಭಕರ ಶಿವ ॥

ಮಹಾಂಪಾದಿ ದೇವಾದೇವೇಶಾ ಶ್ರೀಶೈಲವಾಸಾ
ಚಂದ್ರ ಮೌಳಿ ಭೂತೇಶಾ ಮಹಾವಿಭೂಶಾ
ಭಕ್ತಿವಾಸಾ ಕಾಲ ತೋಷಾ ಭಕ್ತ ವೃಂದ ಪೋಷ
"ಮಹಾಂಪಾಪಿ ದೇವಾದೇವೇಶಾ॥
ಮನ್ಮಥಧಹನಾ ಶಾಸ್ವಥ ವದನಾ ತೋಷಾಭ ಶ್ರೀ ಭಕ್ತಿವಾಸಾ
ಶಂಭೋ ಶ್ರೀಗಿರಿಶಾ ಶಂಭೋ ಶ್ರೀಗಿರಿಶಾ ಶಂಭೋ
ಶ್ರೀಗಿರಿಶಾ ॥

## ೩.೪ ಸಿದ್ದಗಿರಿ ಸ್ವಾಮಿಗಳು ಅಭಿನಯಿಸಿದ ನಾಟಕಗಳು

### ಶ್ರೀ ಕೃಷ್ಣ ಪಾರಿಜಾತ

**ಸಾರಾಂಶ :**

ಭೂಮಿದೇವಿಯು ದೈತ್ಯರಿಂದ ತುಂಬಿದ ಪಾಪದ ಭಾರವನ್ನು ಧರಿಸಲಾರದೇ ಕ್ಷೀರಾರ್ಣವಕ್ಕೆ ಶ್ರೀ ಹರಿಯಲ್ಲಿಗೆ ಆಗಮಿಸಿ ಶಿರಬಾಗಿ ಅಂಜಲಿವೆರಸಿ 'ದನುಜ ಮದಗಜಸಿಂಹ ನರಹರಿಯೆ ದನುಜ ಭಾರವ ಪರಿಹರಿಸಬೇಕೆಂದು ಭಿನ್ನಹವ ಮಾಡಿದಳು, ಶ್ರೀ ಹರಿಯು ಧರಣಿಗಭಯವನ್ನಿತ್ತು. ಕಳುಹಿಸಿದನು, ಮುಂದೆ ದೇವಕಿಯ ಗರ್ಭದಲ್ಲಿ ಶ್ರೀ ಕೃಷ್ಣನಾಗಿ ಜನಿಸಿದನು. ಬಾಲ್ಯದಲ್ಲಿರುವಾಗಲೇ ಅನೇಕ ಅದ್ಭುತಮಯವಾದ ಲೀಲೆಗಳನ್ನು ಮಾಡಿ ಪಾಪಿಯಾದ ಕಂಸನನ್ನು ಸಂವರಿಸಿ ತಾಯಿ-ತಂದೆಗಳನ್ನು ಬಂದ ಮುಕ್ತರನಾಗಿ ಮಾಡಿ ಸಾಗರದ ಮಧ್ಯದಲ್ಲಿ ದ್ವಾರಕಿಯಂಬ ರಾಜಧಾನಿಯನ್ನು ನಿರ್ಮಿಸಿ ನೆಲಸಿದರು, ಅಲ್ಲಿ ನೀಲೆ, ಭದ್ರೆ ಮಿತ್ರವೃಂದೆ. ಕಾಳಿಂದೆ, ಲಕ್ಷಣಿ, ಜಾಂಬವತಿ, ಸತ್ಯಭಾಮೆ, ರುಕ್ಮಿಣಿಯರೆಂಬ ಅನುಪಮ ಸುಂದರಿಯರನ್ನು ವಿವಾಹವಾಗಿ ಅಷ್ಟೈಶ್ವರ್ಯ ಭೋಗದಲ್ಲಿದ್ದನು. ಒಂದು ದಿನ ದೇವರ್ಷಿ ನಾರದನು ಶ್ರೀ ಕೃಷ್ಣನಲ್ಲಿಗೆ ಬಂದು 'ಶೌರಿ' ಮುಕುಂದ ಸುರಪನ ಲೋಕದಿಂದ ಪಾರಿಜಾತದ ಕುಸುಮವನ್ನು ತಂದಿದ್ದೇನೆ. ಇದು ರುಕ್ಮಿಣಿಗೇ ಸಲ್ಲುವಂತಹದ್ದು' ಎಂದು ಹೇಳಿ ಅದನ್ನು ಅರ್ಪಿಸಿದನು. ಶ್ರೀ ಕೃಷ್ಣನು ಆ ಕುಸುಮವನ್ನು ಪಟ್ಟದರಸಿ ರುಕ್ಮಿಣಿಗೆ ಮುಡಿಸಿದನು. ಅಲ್ಲಿಂದ ದೇವರ್ಷಿ ನಾರದನು ಸತ್ಯಭಾಮೆಯ ಅಂತಃಪುರಕ್ಕೆ ಬಂದು ಶ್ರೀ ಕೃಷ್ಣನು ತಾನು ಕೊಟ್ಟ ಪಾರಿಜಾತವನ್ನು ರುಕ್ಮಿಣಿಗೆ ಮುಡಿಸಿದನೆಂದೂ ಆ ಕುಸುಮದ ಮಹಿಮೆ ಅಪಾರವೆಂದೂ ಹೇಳಿ ಅಲ್ಲಿಂದ ನಿರ್ಗಮಿಸಿದನು, ಆತ್ಮಾಭಿಮಾನ ವಿರುವ ಸತ್ಯಭಾಮೆ ಶ್ರೀಕೃಷ್ಣನ ಈ ಪಕ್ಷಪಾತಕ್ಕೆ ಸಿಟ್ಟಿಗೆದ್ದಳು, ಕೃಷ್ಣನಿಗೆ ಮನೆಗೆ ಬರುವಂತೆ ಭಿನ್ನಯಿಸಿ ಪತ್ರ ಬರೆದು ರಾಜಕೀರದ ಮುಖದಲ್ಲಿರಿಸಿ ಕಳುಹಿಸಿದಳು ನಾರದನ ಕುಚ್ಯೋದ್ಯವನ್ನರಿತು, ಕೃಷ್ಣನು ತಾನೊಂದು ಮಧುರವಾದ ಪತ್ರ ಬರೆದು ಅದೇ ಗಿಳಿಯ ಮುಖದಲ್ಲಿಟ್ಟು ಕಳುಹಿಸಿದನು. ಈ ಒಣ ಮಾತಿನಿಂದ ಅವಳ ತಾಪವು ಇನ್ನೂ ಹೆಚ್ಚಾಯಿತು. ತನ್ನ ತವರು ಮನೆಯ ದೂತೆಯನ್ನೇ ಕಳುಹಿಸಿದಳು.

ಕಳುಹಿಸಿದನು. ಈ ಒಣ ಮಾತಿನಿಂದ ಅವಳ ತಾಪವು ಇನ್ನೂ ಹೆಚ್ಚಾಯಿತು. ತನ್ನ ತವರು ಮನೆಯ ದೂತೆಯನ್ನೇ ಕಳುಹಿಸಿದಳು.

ರುಕ್ಮಿಣಿಯು ದೂತೆಯನ್ನು ಭಂಗಿಸಿ ಕಳುಹಿಸಿದಳು ಇದರಿಂದ ಸತ್ಯಭಾಮೆಯ ದುಃಖ ಮಿತಿ ಮೀರಿತು ಮದನತಾಪ ಉನ್ಮತ್ತತೆಗೇರಿತು, "ಎನ್ನ ಪೋಲುವ ಪಾಪಿ ಹೆಣ್ಣು ಈ ಭೂಮಿಯೊಳಗೆ ಮುನ್ನೇಳು ಜನ್ಮಕ್ಕೆ ಜನಿಸಬೇಡಾ ಎಂದು ನಿಂದಿಸಿಕೊಂಡಳು ಈ ರೀತಿ ತನ್ನನ್ನು ವಂಚಿಸಿದ ಕಪಟ ನಾಟಕಿಗೆ ಮುಸುಗುವ ಸುಗಂಧಾಂಗಿಯನು ಮೆಚ್ಚದಿರೆ ಎಸಗುವ ಕುಗಂಧಾಂಗಿ ಮತ್ಸ್ಯನಾಗು ಎಂದು ಮಂತಾಗಿ ದಶಾವತಾರಗಳಲ್ಲಿ ಹುಟ್ಟುವಂತೆ ಶಾಪಕೊಟ್ಟಳು, ತನ್ನನ್ನು ಹುಟ್ಟಿಸಿದ ಬ್ರಹ್ಮನಿಗೆ ಅವನ ಪಟ್ಟದ ರಾಣಿ ಅವನಿಯೋಳ್ ತಿರಿ ತಿನಲಿ, ಅವನ ಸಹೋದರಿ ಶಿವನ ಸೇರಲಿ ಅವನ ಸುತನಿದ್ದಲ್ಲಿ ಕಲಹ ಬರಲಿ, ಅವನ ಪೂಜಿಸಬೇಡ ಅವಳ ಲೋಕದ ಜನರು ಅವನ ಪಟ್ಟಕ್ಕೆ ಮುಂದೆ ಹನುಮ ಬರಲಿ ಎಂದು ಶಾಪವಿತ್ತಳು, ಏನಾದರೇನು ನವಮಲ್ಲಿಕಾಶರದ ಹತಿಯನ್ನು ತಾಳಲಾರದಾದಳು, ತನ್ನ ಮಗನೇ ಆದರೂ ಈ ಪೀಡಿಸುವ ಪಾಪಿ ಮದನನ್ನೂ ಶಪಿಸಿದಳು, "ನೆರೆದಂಡೆಲವ ಮಾರ ಉರಿದು ಬೀಳಲೋ ನೀನು ಪರರ ಪ್ರಪಂಚದಲಿರಲಿ ಕೋಗಿಲೆಗಳು ಸ್ಮರನ ಕಬ್ಬು ಗಾಣದಲಿ ಬೀಳಲಿ, ಅವನ ಸರಳಗಳ ಮದ್ದಾನೆ ಮುರಿಯಲಿ ಅರಗಿಳಿಯು ಪಂಜರದೊಳಿರಲಿ ಇರುಳಾಳನನ್ನು ರಾಹು ತುಡುಕಲಿ ಈ ಕ್ಷಣದಿ ಮರಿದುಂಬಿ ಕಮಲದೊಳು ಮುಚ್ಚಲಿ"

ಏನಾದರೇನು ಕಾನನದೆ ಕಾದ ಬೆಳದಿಂಗಳಂತೆ ಎನ್ನ ಯೌನವು ವ್ಯರ್ಥವಾಯಿತು. ಎಂದು ಸಖಿಯಲ್ಲಿ ಮೊರೆಯಿಟ್ಟಳು ಕೊನೆಗೆ ತಾನೇ ತನ್ನ ರೂಪ ಮೋಹದಿಂದ ಕಟ್ಟಿ ತರಬೇಕೆಂದು ಅಂದನವನೇರಿ ಹೊರಟಳು. 'ರುಕ್ಮಿಣಿಯೊಂದಿಗೆ ಲೆತ್ತದಾಟದಲ್ಲಿ ತೊಡಗಿದ ಕೃಷ್ಣನನ್ನು ಎರವಿನಾಭರಣದಂತೆ ಕಂಡಳು, ಕೃಷ್ಣನು ಇವಳ ಕಡೆಗೆ ಕಣ್ಣೂ ಹೊರಳಿಸಲಿಲ್ಲ. ಮಾತೂ ಆಡಸಲಿಲ್ಲ. ಅವಮಾನ ಅತಿಯೆನಸಿ, ಕ್ರೋಧ ಮಸ್ತಕಕ್ಕೇರಿ ಹೋಗುತ್ತಿರುವಾಗಲೇ ಕೃಷ್ಣ ಅವಳನ್ನು ಹಿಡಿದು ಸಂತೈಸಿದನು. ಮೂರ್ಛೆ ತಿಳಿದೆದ್ದು ರುಕ್ಮಿಣಿಯನ್ನು ಆ ಮಾಯಾವಿನಿ ಸವತಿಯನ್ನು ಸಕ್ಕರಿಯೊಳಗಿನ ಚೂರೇ ರುಕ್ಮಿಣಿ ಎಂದು ಜರೆದು ಶ್ರೀಕೃಷ್ಣನಿಗೆ ಎಲೋಕೃಷ್ಣ ಹೆಂಗೆಳೆಯರ ಉಸಿರು ಒಳಿತಲ್ಲ ಈ ಸೊಗಸು ಈ ಒನಪು ಈ ಸರ್ವಶೃಂಗಾರ ಕಾಸು ಬಾಳದು ನಿನ್ನನಗಲಿ ಪವ್ವಳಿಸಲು ಅನ್ನೋದಕವಕೊಂಡರೆ ನಿನ್ನ ಪಾದವೇ ಸಾಕ್ಷಿ, ಬೆನ್ನು ಹೆಜ್ಜೆನು ಹಾಸಿಗೆಗೆ ಇದೇ ಎನಗೆ

ಕರಗಿಸದಿದ್ದರೆ ನಾನು ಹೆಣ್ಣೆ ? ಕಣ್ಣಿಗ್ಗುಬ್ಬಿಗೆ ನೋಡು ಕಡುದೂರವಿಲ್ಲ ಎಂದು ಬಿಟ್ಟ ಬಾಣದಂತೆ ಹೋಗಿಬಿಟ್ಟಳು.[೨]

ಈ ಸನ್ನಿವೇಶದಲ್ಲಿ ಶ್ರೀ ಸಿದ್ಧಗಿರಿ ಸ್ವಾಮಿಗಳ ಸತ್ಯಭಾಮೆಯ ಪಾತ್ರದ ವೈಖರಿ, ಅದ್ಭುತ, ನೋಡಿದರೆ ಪ್ರತಿಯೊಬ್ಬರಲ್ಲಯೂ ಕಣ್ಮನ ಸೆಳೆಯುವ ನೋಟ ಅವರ ಪಾತ್ರಾಭಿನಯದಲ್ಲಿ ಕಂಡು ಬರುತ್ತಿತ್ತು.

---

ಈ ಕಥಾಸಾರವನ್ನು ಬರೆಯಲು ಶ್ರೀ ಕೃಷ್ಣ ಪಾರಿಜಾತ ಎಂಬ ಧ್ವನಿಸುರಳಿಯ (ಅಪ್ಪಾಲಾಲ) ಸಹಾಯ ಹಾಗೂ ಪ್ರೇಕ್ಷಕರಿಂದ ಮಾಹಿತಿ ಸಂಗ್ರಹಿಸಲಾಗಿದೆ.

## ಸಂಪೂರ್ಣ ಹೇಮರಡ್ಡಿ ಮಲ್ಲಮ್ಮ (೧೯೩೭-೧೯೬೭)

**ಸಾರಾಂಶ**

೧೯೩೭ ರಿಂದ ೧೯೬೭ ರ ವರೆಗೆ ಸಂಪೂರ್ಣ ಹೇಮರಡಡಿ ಮಲ್ಲಮ್ಮ ಎಂಬ ಸಣ್ಣ ನಾಟಕವನ್ನು ಶ್ರೀ ಮಲ್ಲಿಕಾರ್ಜುನ ಪ್ರಸಾಧಿಕ ನಾಟ್ಯ ಸಂಘ ಮಧುರಖಂಡಿಯ ಮೂಲಕ ಪ್ರದರ್ಶಿಸಲಾಯಿತು. ಈ ನಾಟಕದಲ್ಲಿ ಶಿವಶರಣೆ ಮಲ್ಲಮ್ಮನ ಪ್ರಮುಖ ಸ್ತ್ರೀ ಪಾತ್ರದಾರಿಯಾಗಿ ಸಿದ್ಧಗಿರಿ ಸ್ವಾಮಿಗಳು ಅಭಿನಯಿಸಿದರು.

ಈ ಬೈಲಾಟ  ಇಲ್ಲದೆ ಓಕಳಿ, ಐದೇಶಿ, ಜಾತ್ರೆಗಳು, ನಡೆಯಲಾರವೆಂಬ ಮಟ್ಟಿಗೆ ಈ ಕಂಪನಿಯು ಜನಪ್ರೀಯತೆಯನ್ನು ಗಳಿಸಿತು, ಇದಕ್ಕೆ ಕಾರಣವೂ ಇತ್ತು. ಸುಸಂಬದ್ಧವಾದ ಸಂಗೀತ ಈ ಬೈಲಾಟದ ಮುಖ್ಯ ಅಂಗವಾಗಿತ್ತು, ಮಲ್ಲಮನು ಗಂಡನ ಮನೆಗೆ ಹೋಗುವಾಗ ;

**"ಹೃದಯ ವ್ಯಥೆ ನಾ ತಾಳೆ ಮಮ ಜನನನಿ ।**
**ಸದಾ ಪ್ರೇಮ ಸದನೆ ಕರುಣೆ ।**
**ಮೋಹಮಣಿ ಹೃದಯ ವ್ಯಥೆ ॥"**

ಈ ಪದ್ಯವನ್ನು ಮಾಂಡರಾಗದಲ್ಲಿ ಹಾಡುವುದನ್ನು ಸ್ವತಃ ಅವರ ಬಾಯಿಯಿಂದಲೇ ಕೇಳಬೇಕು.

ಸಂಗೀತ ಪ್ರೀಯರಿಗೆ ಅದೊಂದು ರಸದೌತಣವೇ ಸರಿ. ಸಂಗೀತದ ದೃಷ್ಟಿಯಿಂದ ಹೇಳಬೇಕಾದರೆ ಈ ಕಂಪನಿಗೆ ಸರಿಗಟ್ಟುವಂತಹ ವಾದ್ಯ-ವೃಂದ ಬೇರಾವ ಕಂಪನಿಯಲ್ಲಿಯೂ ಇಲ್ಲ. ಹಣಮಂತಪ್ಪಾ ಹೂಗಾರ, ಅಯ್ಯಪ್ಪ ಹೂಗಾರ ಈ ಇಬ್ಬರೂ ತಬಲಾಜಿಯವರು ಈ ಕಂಪನಿಯಿಂದಲೇ ಬೆಳಕಿಗೆ ಬಂದು ಹೆಸರುಗಳಿಸಿದ್ದಾರೆ.

ಮರಾಠಿಯ ನಾಟ್ಯ ಸಂಗೀತವನ್ನು ಹೋಲುವ ಕೇಳುಗರನ್ನು ತಲೆದೂಗಿಸುವ ಹಾಡುಗಳು ಈ ಬೈಲಾಟದಲ್ಲಿ ಉಂಟು. ಹೀಗಾಗಿ ಮಹಾರಾಷ್ಟ್ರದಲ್ಲಿ ಕರ್ನಾಟಕದಷ್ಟೇ ಯಶಸ್ವಿ ಪ್ರಯೋಗಗಳನ್ನು ಈ ನಾಟಕ ಕಂಡಿದೆ. ಈ ಎಲ್ಲದಕ್ಕೂ ದಿಕ್ಸೂಚಿ ಎಂದರೆ

ಮರಾಠಿಯ ನಾಟ್ಯ ಸಂಗೀತವನ್ನು ಹೋಲುವ ಕೇಳುಗರನ್ನು ತಲೆದೂಗಿಸುವ ಹಾಡುಗಳು ಈ ಬೈಲಾಟದಲ್ಲಿ ಉಂಟು. ಹೀಗಾಗಿ ಮಹಾರಾಷ್ಟ್ರದಲ್ಲಿ ಕರ್ನಾಟಕದಷ್ಟೇ ಯಶಸ್ವಿ ಪ್ರಯೋಗಗಳನ್ನು ಈ ನಾಟಕ ಕಂಡಿದೆ. ಈ ಎಲ್ಲದಕ್ಕೂ ದಿಕ್ಸೂಚಿ ಎಂದರೆ ಸಿದ್ಧಗಿರಿ ಮಹಾಸ್ವಾಮಿಗಳು ಎಂದು ನಿರ್ವಿವಾದವಾಗಿ ಹೇಳಬಹುದು. ಈ ನಾಟಕದಲ್ಲಿ ಇವರು ಹಿಂದೂಸ್ತಾನಿ ಸಂಗೀತವನ್ನೇ ಮುಖ್ಯವಾಗಿ ಬಳಸಿಕೊಂಡಿದ್ದರು, ಕರ್ನಾಟಕ ಸಂಗೀತದ ರಾಗಗಳಿಂದ ಕೂಡಿದ ಹಾಡುಗಳು ಕೇವಲ ಕೈ ಬೆರಳುಗಳ ಮೇಲೆ ಎನಿಸುವಷ್ಟು ಮಾತ್ರ ಇದ್ದವು. ಮೊದಲು ಧ್ವನಿ ವರ್ದಕಗಳ ಬಳಕೆ ಇದ್ದಿರಲಿಲ್ಲ. ಸಿದ್ದಗಿರಿ ಸ್ವಾಮಿಗಳು ಅಟ್ಟದ ಎಡಭಾಗದ ಜನರನ್ನುದ್ದೇಶಿಸಿ ರಾಗ ಪ್ರಾರಂಭಿಸಿದರೆ ಅಟ್ಟದ ಎದುರಿನ ಪ್ರೇಕ್ಷಕರಿಗೂ ಬಲಭಾಗದ ಪ್ರೇಕ್ಷಕರಿಗೂ ಮುಖ ಕಾಣುವವರೆಗೆ ಒಂದೇ ಸ್ವರದ ರಾಗವನ್ನು ನಿಲ್ಲಿಸುತ್ತಿರಲಿಲ್ಲ. ಬೇಗನೆ ತಿರುಗಿದರೆ ಸ್ತ್ರೀ ಪಾತ್ರಕ್ಕೆ ಕುಂದು ಬರುತ್ತದೆ ಎಂದು ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡೇ ಸಿದ್ದಗಿರಿ ಸ್ವಾಮಿಗಳು ಹಾಡುಗಾರಿಕೆಯಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ಉಳಿಸಿಕೊಂಡಿದ್ದರು.

ಅದರಲ್ಲಿ ವಿಶೇಷವಾಗಿ ಮಲ್ಲಮ್ಮನ ಪಾತ್ರದ ಭಕ್ತಿ ಪ್ರಧಾನವಾದುದರಿಂದ ಮಲ್ಲಮ್ಮನೇ ತಾವಾಗಿ ಭಕ್ತಿ ಶ್ರದ್ಧೆ, ನಯ, ನಾಜೂಕುಗಳಿಂದ ಅಭಿನಯಿಸುತ್ತಿದ್ದರು. ದುಃಖದ ಸಂದರ್ಭದಲ್ಲಿ ಪಾತ್ರ ಮಾಡಿ ಬಂದ ತಕ್ಷಣ ಅಟ್ಟದ ಹಿಂದೆ ಅವರನ್ನು ಕೆಲವು ಸಮಯದವರೆಗೆ ಯಾರೂ ಮಾತನಾಡಿಸುತ್ತಿರಲಿಲ್ಲ. ಯಾಕೆಂದರೆ ದುಃಖದ ಆವೇಶ ಇನ್ನೂ ಹಾಗೆಯೇ ಇರುತ್ತಿತ್ತೆಂದೂ ಅವರನ್ನು ಮಾತನಾಡಿಸಿದರೆ ಕೋಪಿಸಿಕೊಳ್ಳುತ್ತಿದ್ದರೆಂದೂ ಸಹ ನಟರು ಮತ್ತು ಅನೇಕ ಹಿರಿಯ ಜನರು ಹೇಳುವುದುಂಟು.

ಬೈಲಾಟ ನಡೆದಾಗ ನಡೆದ ಒಂದು ಘಟನೆಯನ್ನು ಈಗಲೂ ಜನ ನೆನಪಿಸಿಕೊಳ್ಳುತ್ತಾರೆ.

ಈ ಬೈಲಾಟದ ಪಾತ್ರದಾರಿಗಳೆಲ್ಲ ಜಂಗಮವರ್ಗದವರು. ಇದು ರಡ್ಡಿ ವಂಶಜರ ಕಥಾವಸ್ತುವನ್ನು ಒಳಗೊಂಡ ಬೈಲಾಟ. ರಡ್ಡಿ ಜನಾಂಗದವರಿಗೆ ಈ ಬೈಲಾಟದ ಬಗ್ಗೆ ತುಂಬಾ ಅಭಿಮಾನ. ಅದರಲ್ಲಿ ಮಲ್ಲಿಕಾರ್ಜುನನು ಜಂಗಮನಾಗಿ ಭೀಕ್ಷೆ ಬೇಡಲು ಬಂದಾಗ ಮಲ್ಲಮ್ಮನ ನೆಗೆವೆಣ್ಣಿಯರು ಮೈ ಹಣ್ಣಾಗುವ ಹಾಗೆ ಬಡಿದು ಕಳುಹಿಸುತ್ತಾರೆ.

ಮುಂದೆ ಜಂಗಮನು ಕಾಡಿನಲ್ಲಿರುವ ಮಲ್ಲಮ್ಮನ ಹತ್ತಿರ ಬಂದು ಹಳಸಿದ ಅಂಬಲಿಯನ್ನೇ ಸೇವಿಸಿ ಮಲ್ಲಮ್ಮ ನೀನು ನನಗೆ ನೀಡಿರುವ ಅಂಬಲಿ, ಹಳಸಿದ ಅಂಬಲಿ ಅಲ್ಲಮ್ಮಾ. ಅಮೃತ ಅಮೃತ ಅಮೃತ ಎಂದು ಹೇಳಿ ಮಾತನ್ನು ಮುಂದುವರಿಸಿ, ಆದರೆ ನಿನ್ನ ನೆಗೆವೆಣ್ಣಿಯರು ನನ್ನ ಮೈ ನುಗ್ಗಾಗುವಂತೆ ಹೊಡೆದರು ರಡ್ಡಿಯ ವಂಶ ನಿರ್ವಂಶವಾಗುವಂತೆ ಶಾಪ ಕೊಡುತ್ತೇನೆ ಎಂದು ಆವೇಶದಿಂದ ಹೇಳಿ॥

**'ಮಹಾ ಶಾಪಕೊಡುವೆ ವಿನಾಶ**

**ಮಹಾಶಾಪಕೊಡುವೆ ಗೈದ ಭಾಗ್ಯವೇ ನಾ. ಹರಿಸುವೆ ॥**

**ಮಹಾಶಾಪ ॥'**

ಎಂದು ಹಾಡಿನ ರೂಪದಲ್ಲಿ ಮಾಲಕೌಂಸ ರಾಗದಲ್ಲಿ ಅದ್ದೂರಿಯ ಸಂಗೀತ ಮೊಳಗಿ ಒಮ್ಮೆಲೇ ನಿಂತಾಗ, ಪ್ರೇಕ್ಷಕ ವರ್ಗದಲ್ಲಿರುವ ಒಬ್ಬ ಹಿರಿಯ (ಗುರುಲಿಂಗಪ್ಪ ಪರಪ್ಪನವರ) 'ಥೂ ಸ್ವಾಮಿ ಘಾತ ಮಾಡಿದ ನಮ್ಮೂರಿನ ರಡ್ಯಾರು ಇನ್ನೇನ ಮೆಟ್ಟಿಗ್ಹತ್ಯಾರ, ಸ್ವಾಮಿ ಕೊಂದ ಒಗದ ಎಲ್ಲಾರ್ನು' ಎಂದು ಜೋರಾಗಿ ಬಾಯಿ ಮಾಡಲು, ಅವರಲ್ಲಿಯ ಇನ್ನೊಬ್ಬ ಹಿರಿಯ 'ಎ ಗುರಲಿಂಗಪ್ಪ ಅದು ಆಟೈತಿ, ಒಂದ ಸ್ವಲ್ಪ ಸುದ್ಯಾಗ ಬಾ ಆಂವಾ ಖರೆ ಮಲ್ಲಿಕಾರ್ಜುನ ಅಲ್ಲ. ಇದನ ಮೊದಲು ತಿಳಿಕೊ' ಎಂದು ಎಚ್ಚರಿಸಿದ ಆಗ ಗುರಲಿಂಗಪ್ಪನು 'ಆಂ' ಎಂದು ಎಚ್ಚರಾಗಿ ದೀರ್ಘ ಉಸಿರು ಬಿಟ್ಟನು. ಪ್ರೇಕ್ಷಕರನ್ನು ಸ್ಪಂದಿಸುವಂತೆ ಅಭಿನಯ ಚಾತುರ್ಯ ಸಿದ್ಧಗಿರಿ ಸ್ವಾಮಿಗಳವರ ಬೈಲಾಟದಲ್ಲಿ ಇತ್ತೆಂಬುದಕ್ಕೆ ಇಂಥ ಅನೇಕ ಘಟನೆಗಳು ಸಾಕ್ಷಿಯಾಗಿ ಇಂದಿಗೂ ಜನಮನದಲ್ಲಿ ಇದೆ.

ಮಲ್ಲಮ್ಮ ತನ್ನ ಪತಿಗೆ ಮಲ್ಲಿಕಾರ್ಜುನನ ದರ್ಶನ ಮಾಡುವುದರ ಸಲುವಾಗಿ ಎರಡೂ ಕೈಗಳನ್ನು ಆಕಾಶದೆಡೆಗೆ ಎತ್ತಿ ಬೈರವಿ ರಾಗದಲ್ಲಿ

**'ತೋರೆ ದಿವ್ಯರೂಪ ಮಲ್ಲಯ್ಯ**

**ಮಹಾಕಾರುಣ್ಯವಾ ಕರುಣಾ ಸಾಗರಾ**

**ಮಾಯಾಸಂಸಾರ ವಿಧೂರಾ ತೋರೋದಿವ್ಯರೂಪ**

**ಮಲ್ಲಯ್ಯ ತೋರೆದಿವ್ಯರೂಪ ಬಾರೊ**

**ದಿವ್ಯ ಜ್ಞಾನ ಸದಯೊ ತೋರೊ॥'**

ನಮಿಸಿದ್ದುಂಟು. ಸಿದ್ಧಗಿರಿ ಸ್ವಾಮಿಗಳ ಮಲ್ಲಮ್ಮನ ಬೈಲಾಟದ ವೈಖರಿಯೇ ಅಂತಹದಿತ್ತೆಂಬುದು ಉತ್ತರ ಕರ್ನಾಟಕದ ಜನತೆಯ ಒಟ್ಟು ಅಭಿಪ್ರಾಯ.

ಹೀಗೆ ೧೯೩೭ರಲ್ಲಿ ಪ್ರಾರಂಭಗೊಂಡ ಈ ಬೈಲಾಟವು ೧೯೬೭ರ ವರೆಗೆ ಯಶಸ್ವಿಯಾಗಿ ಪ್ರದರ್ಶನಗೊಂಡಿತು ಇವರ ಅಭಿಯನದ ವೈಶಿಷ್ಟ್ಯವನ್ನು ನೋಡಿ ಹೇಮರಡ್ಡಿ ಮಲ್ಲಮ್ಮನ ಬದಲಾಗಿ 'ಮಧುರಖಂಡಿ ಮಲ್ಲಮ್ಮ' ಎಂಬ ಹೆಸರು ಅನ್ವಯವಾಯಿತು. ಈ ಎಲ್ಲ ಶ್ರೇಯಸ್ಸು ಸಿದ್ಧಗಿರಿ ಸ್ವಾಮಿಗಳಿಗೆ ಸಲ್ಲುತ್ತದೆ.

---

ಮಧುರಖಂಡಿಯ ಶ್ರೀ ಮಲ್ಲಯ್ಯ ಹಿಡಕಲ್ ಅವರ ಸಂದರ್ಶನದಿಂದ ಈ ಕಥಾಸಾರವನ್ನು ಸಂಗ್ರಹಿಸಲಾಗಿದೆ.
ಸಂಪೂರ್ಣ ಹೇರಡ್ಡಿ ಮಲ್ಲಮ್ಮ (೧೯೩೭–೧೯೬೭)




ಸಂಪೂರ್ಣ ಹೇಮರಡ್ಡಿ ಮಲ್ಲಮ್ಮ ನಾಟಕ ಮಂಡಳಿ ಮಲ್ಲಮ್ಮನ ಪಾತ್ರದಲ್ಲಿ ಶ್ರೀ ಸಿದ್ಧಗಿರಿ ಸ್ವಾಮಿಗಳು

## ಶಿವ ಶರಣೆ ನೆಲ್ಲೂರ ನಿಂಬೆಕ್ಕ

**ಸಾರಾಂಶ**

ಶಿವಭಕ್ತರು ತುಂಬಿದ ಊರು ಅದು ಆ ಊರಲ್ಲಿ ಶಿವಶರಣೆ ನೆಲ್ಲೂರ ನಿಂಬೆಕ್ಕ ಎಂಬುವಳು ಇದ್ದಳು ಆಕೆಗೆ ಒಬ್ಬ ಮಗ ಕೂಡ ಇದ್ದನು ಆತನ ಹೆಸರು ಶಿವಾನಂದ ಆ ಮಗುವನ್ನು ಬಹಳ ಮುದ್ದಿನಿಂದ ಸಾಕಿದ್ದಳು. ಹೀಗಿರುವಾಗ.

ಒಮ್ಮೆ ಕೈಲಾಸದ ಶಿವನ ಒಡ್ಡೋಲಗದಲ್ಲಿ ಹಲವಾರು ಗಣದರರು ಸೇರಿ ಚರ್ಚೆ ನಡೆಸುತ್ತಿದ್ದರು. ಶಿವನ ಮುಂದೆ ಶಿರಿಯಾಳನು ನಾನೇ ಶ್ರೇಷ್ಟ ಭಕ್ತ ಎಂದು ಗರ್ವದಿಂದ ನುಡಿಯುತ್ತಿದ್ದನು. ಈತನ ಗರ್ವ ಮುರಿಯಲು ಭಕ್ತಿಗೆ ಮೆಚ್ಚದ ಶಿವ ಭೂಲೋಕದಲ್ಲಿ ನಿನಗಿಂತಲೂ ಶ್ರೇಷ್ಟತೆ ಪಡೆದಿರುವ ಶಿವಶರಣೆ ನೆಲ್ಲೂರ ನಿಂಬೆಕ್ಕ ಇದ್ದಾಳೆ ಎಂದು ಹೇಳಿದನು, ಆಗ ಶಿರಿಯಾಳನು ಅವಳನ್ನು ಪರೀಕ್ಷಿಸುವೆ ಎಂದು ಹೇಳಿದಾಗ, ಆಗಲಿ ಎಂದು ಶಿವ ಶಿರಿಯಾಳ ಇಬ್ಬರೂ ನಿಂಬೆಕ್ಕನ ಮನೆಗೆ ಬಂದಾಗ, ಜಂಗಮ ಪ್ರೇಮಿಯಾದ ನಿಂಬೆಕ್ಕ ಆದರ ಭಕ್ತಿ ಗೌರವಗಳಿಂದ ಅತಿಥಿ ಉಪಚಾರ ಮಾಡಲುಮುಂದಾದಳು.

ಜಂಗಮ ವೇಷ ಧರಿಸಿದ ಶಿರಿಯಾಳನು ನಮಗೆ ಬಹಳ ಹೊಟ್ಟೆ ಹಸಿದಿದೆ ಮೃಷ್ಟಾನ್ನ ಭೋಜನ ಮಾಡಿಸಬೇಕು ಎಂದು ಕೇಳಿಕೊಂಡಾಗ. ಆಗಲಿ ಮಹಾ ಪೂಜ್ಯರೆ ಎಂದು ನಿಂಬೆಕ್ಕ ಭಕ್ತಿಯಿಂದ ಅಡುಗೆ ಮಾಡಲು ಪ್ರಾರಂಭಿಸಿದಳು. 'ನೀನು ಅಡುಗೆ ಮಾಡು ನಾವು ಸ್ವಲ್ಪ ಸಮಯದ ನಂತರ ಬರುತ್ತೇವೆ' ಎಂದು ಹೇಳಿ ಮನೆ ಹೊರಗೆ ಬಂದಾಗ, ಅಂಗಳದಲ್ಲಿ ನಿಂಬೆಕ್ಕನ ಮಗ ಶಿವಾನಂದ ಆಟವಾಡುತ್ತಿದ್ದನು, ಇದೇ ಒಳ್ಳೆ ಸಮಯ ಎಂದು ತಿಳಿದ ಶಿರಿಯಾಳ ಏ ಮಗು ನಿಮ್ಮ ಅಮ್ಮ ಒಳಗೆ ಹೂರಣ ಕಡುಬ ಮಾಡುತ್ತಿದ್ದಾಳೆ, 'ಹೋಗಿ ತಿಂದು ಬಾ' ಎಂದು ಹೇಳಿದಾಗ ಆ ಮಗು ಒಳಗೆ ಬಂದು ಎಂಜಲ ಕೈಯಿಂದ ಹೂರಣಕ್ಕೆ ಕೈ ಹಾಕಿತಿನ್ನಲು ಪ್ರಾರಂಭಿಸಿತು. ಆಕಸ್ಮಿಕವಾಗಿ ನೋಡಿದ ತಾಯಿ 'ಜಂಗಮರು' ತಿನ್ನುವುದಕ್ಕಿಂತ ಪೂರ್ವದಲ್ಲಿ ತಿಂದು ಎಂಜಲುಮಾಡಿ ಅಪವಿತ್ರಗೊಳಿಸಿದೆ? ಎಂದು ಮೂಲೆಯಲ್ಲಿರುವ ಒನಕೆಯನ್ನು ತೆಗೆದುಕೊಂಡು ಮಗುವಿನ ತಲೆಗೆ ಹೊಡೆಯುವಷ್ಟರಲ್ಲಿ ಆ ಮಗು ಅಸು ನೀಗಿತು. ಗಾಬರಿಗೊಂಡ ನಿಂಬೆಕ್ಕ ಮಗುವಿನ ಶವವನ್ನು ಮನೆಯ ಮದ್ಯದಲ್ಲಿ ಒಂದು ಪರದೆ ಕಟ್ಟಿ, ಒಂದು ಬದಿಗೆ

ಮಲಗಿಸಿ, ಇನ್ನೊಂದು ಬದಿಯಲ್ಲಿ ಮೈಲಿಗೆಯಾದ ಮನೆಯನ್ನು ಪುನಃ ತೊಳೆದು ಸಾರಿಸಿ ಮಡಿಮಾಡಿ ಅಡುಗೆ ಮಾಡಿದಳು ಹಸಿದು ಬಂದ ಜಂಗಮರನ್ನು ಊಟ ಬಡಿಸಿ ಸಂತೃಪ್ತಳಾಗಬೇಕೆಂದು. ಮಣೆ ಹಾಕಿ ಎಡೆಮಾಡಿ ಮುಂದೆ ತಂದು ಇಟ್ಟಾಗ ಶಿರಿಯಾಳ ಊಟ ಮಾಡದೆ 'ನಿನ್ನ ಮಗನನ್ನು ಕರೆ ಎಂದು ಹೇಳಿದನು. ನಿಂಬೆಕ್ಕ ಏನೂ ತೋಚದೆ ಸ್ವಲ್ಪ ಸಮಯದ ವರೆಗೆ ನಿಂತು. ಆತ ಹೊರಗೆ ಹೋಗಿದ್ದಾನೆ, ತಾವು ಊಟ ಮಾಡಿ ಎಂದು ಹೇಳದರೂ ಜಂಗಮರು ಕೇಳಲಲ್ಲಿ. 'ಇಲ್ಲ ಆ ಮಗುವನ್ನು ಕರೆ ಆತನ ಜೊತೆಯಲ್ಲಿಯೇ ನಾವು ಊಟ ಮಾಡುತ್ತೆವೆ', ಎಂದು ಹಟ ಮಾಡಿದಾಗ ಒಳಗೆ ಬಂದು ನಿಂಬೆಕ್ಕ ಭಗವಂತನ ಕುರಿತು ನಮಿಸಿ ಭಕ್ತಿಭಾವದಿಂದ ಹೆಸರು ತಗೆದು ಮಗುವಿನ ಕಿವಿಯಲ್ಲಿ 'ಶಿವಾನಂದಾ ಬಾರೋ..... ಬಾರೋ.... ಬಾರೋ..... ನಿನ್ನ ಸಲುವಾಗಿ ಜಗತ್ ವಿಖ್ಯಾತರೂ, ಲೋಕ ಪಾಲಕರು ಊಟ ಮಾಡದೇ ಹಾಗೇ ಕುಳಿತಿದ್ದಾರೆ ಬೇಗ ಬಾರೋ..... ಮಗು' ಎಂದು ರೋದಿಸಿ ಕರೆದಾಗ ನಿಂಬೆಕ್ಕನ ಧ್ವನಿ ಕೇಳಿದ ಆ ಮಗುವಿನ ಶವದಲ್ಲಿ ಭಗವಂತ ಚೈತನ್ಯ ತುಂಬಿ ಎಬ್ಬಿಸಿ ಜಂಗಮರ ಮುಂದೆ ಬರುವಂತೆ ಮಾಡಿದಾಗ, ನಿಂಬೆಕ್ಕ ಬಹಳ ಸಂತೋಷದಿಂದ ಮಗುವನ್ನು ಮುದ್ದಾಡಿದಳು. 'ನನ್ನ ಕಂದ' ಎಂದು ಅಪ್ಪಿಕೊಂಡಳು, ಇದು ದೇವರ ಮಾಯೆ, ಎಂದು, ಬಂದ ಜಂಗಮರನ್ನು ಆದರೋಪಚಾರ ಮಾಡಿ ಬಿಳ್ಕೊಡುವಳು.

ಹೀಗೆ ಈ ನಾಟಕದಲ್ಲಿ ಸಿದ್ದಗಿರಿ ಸ್ವಾಮಿಗಳು ನಿಂಬೆಕ್ಕನ ಪಾತ್ರದಲ್ಲಿ ಬಹಳ ವೈಶಿಷ್ಟ್ಯತೆಯಿಂದ ಮೆರೆದದ್ದನ್ನು ನೋಡಬಹುದು, ಯಾಕೆಂದರೆ ನಿಂಬೆಕ್ಕನ ಶಿವ ಭಕ್ತಿ, ಹಾಗೂ ಅವಳು ಜಂಗಮರ ಮೇಲೆ ಇಟ್ಟಿರುವ ಪ್ರೀತಿ, ಭಕ್ತಿಯಿಂದಲೆ ಸತ್ತಿರುವ ಮಗುವನ್ನು, ಭಗವಂತನನ್ನು ಒಲಿಸಿಕೊಂಡು ಮರಳಿ ಪಡೆದುಕೊಂಡಳು, ಈ ಸನ್ನಿವೇಶ ನೋಡಿದ ಪ್ರತಿಯೊಬ್ಬ ಪ್ರೇಕ್ಷಕರಿಗೂ, ತಾವೂ ದೇವರ ಮೇಲೆ ಭಕ್ತಿಭಾವದಿಂದ. ನಡೆದುಕೊಳಬೇಕು ನಮಗೆ ದೇವರು ಕರುಣೆತೋರುತ್ತಾನೆ ಎಂಬ ಭಾವ ಮೂಡುತ್ತಿತ್ತು. ಶ್ರೀ ಸಿದ್ದಗಿರಿ ಸ್ವಾಮಿಗಳ ಅಭಿನಯ ಪ್ರೇಕ್ಷಕರ ಮನಸ್ಸಿನಲ್ಲಿ ಭಕ್ತಿ ಭಾವವನ್ನು ಹೆಚ್ಚಿಸುತ್ತಿತ್ತು. ಪ್ರೇಕ್ಷಕರು ತಮ್ಮ ಬದುಕಿನಲ್ಲೂ ಭಕ್ತಿಗೆ ಶರಣಾಗಿ ನೈತಿಕ ಬದುಕನ್ನು ನಡೆಸುವಂತೆ ನಾಟಕಗಳು ಪ್ರೇರೇಪಿಸುತ್ತಿದ್ದವು. ಇಲ್ಲಿ ಅಭಿನಯ, ನೃತ್ಯ, ಸಂಗೀತಗಳು ಕಥೆಗೆ ಪೂರಕವಾಗಿ ಬಂದು ಪ್ರೇಕ್ಷಕರ ಮನಸ್ಸನ್ನು ಆನಂದದ ಅನುಭವದಲ್ಲಿ ಮುಳುಗಿಸುತ್ತಿದ್ದವು.

---

ಈ ಕಥಾ ಸಾರವನ್ನು ಮಧುರಖಂಡಿಯ ಪ್ರೇಕ್ಷಕರಿಂದ ಸಂಗ್ರಹಿಸಲಾಗಿದೆ




ಜಂಗಮರಿಗೆ ಕೈ ಮುಗಿದು ಕುಳಿತಿರುವ ಲಿಂಬೆಕ್ಕನ ಸ್ತ್ರೀ
ಪಾತ್ರದಲ್ಲಿ ಶ್ರೀ ಸಿದ್ಧಗಿರಿ ಸ್ವಾಮಿಗಳು

## ಶ್ರೀರಾಮ ಪಾದುಕಾ ಪಟ್ಟಾಭಿಷೇಕ ನಾಟಕ

**ಸಾರಾಂಶ**

ದಶರಥ ಮಹಾರಾಜನ ಹೆಂಡಂತಿಯರು ಕೌಶಲ್ಯ ಮತ್ತು ಕೈಕೆ ಕ್ರಮವಾಗಿ ಕೌಶಲ್ಯೆಯ ಮಗ ಶ್ರೀರಾಮ, ಕೈಕೆಯ ಮಗ ಭರತ. ಕೈಕೆಯು ತನ್ನ ಮಗನಿಗೆ ಪಟ್ಟಾಭಿಷೇಕ ಮಾಡಿ ಸಿಂಹಾಸನದ ಮೇಲೆ ಕೂಡ್ರಿಸಬೇಕೆಂಬ ಬಯಕೆಯಿಂದ ಶ್ರೀರಾಮನನ್ನು ವನವಾಸಕ್ಕೆ ಕಳುಹಿಸಿಕೊಡುತ್ತಾಳೆ. ಭರತನು ಅಮ್ಮಾ ನಾನು ರಾಜ್ಯಬಾರ ಮಾಡುವುದಿಲ್ಲ ಅದು ನನಗೆ ಬರುವುದಿಲ್ಲ. ವೆಂದರೂ ಸಹ ಕೇಳದ ಕೈಕೆಯ ಒತ್ತಾಯ ಪೂರ್ವಕವಾಗಿ ಅಧಿಕಾರ ವಹಿಸಿಕೊಟ್ಟಳು, ಶ್ರೀರಾಮ ಹನ್ನೆರಡು ವರ್ಷ ವನವಾಸ ಮತ್ತು ಎರಡು ವರ್ಷ ಅಜ್ಞಾತವಾಸಕ್ಕೆ ಹೋಗಿದ್ದ. ಭರತ ಶ್ರೀರಾಮನ ಹತ್ತಿರ ಹೋಗಿ ನಾನು ರಾಜ್ಯವನ್ನು ನಿನಗೆ ಒಪ್ಪಿಸುವೆ ನಮ್ಮ ತಾಯಿಗೆ ಬುದ್ದಿಯಿಲ್ಲವೆಂದು ಹಿಯಾಳಿಸಿ ಮಾತನಾಡಿದನು. ದಯಮಾಡಿ ರಾಜ್ಯಕ್ಕೆ ಬಂದು ಅದಿಕಾರ ವಹಿಸಿಕೊಳ್ಳಬೇಕೆಂದು ಕೇಳಿಕೊಂಡನು. ಶ್ರೀರಾಮನು ತಾಯಿಯ ಆಜ್ಞೆಯನ್ನು ಮುರಿದು ಬರಲು ಸಾಧ್ಯವಿಲ್ಲವೆಂದಾಗ ಭರತನು ನೀನು ಬರುವ ವರೆಗೆ ನಾನು ರಾಜ್ಯ ನೋಡಿಕೊಳ್ಳುತ್ತೇನೆ ಹೊರತು ಸಿಂಹಾಸನದ ಮೇಲೆ ಕುಳಿತುಕೊಳ್ಳುವುದಿಲ್ಲ ಎಂದು ಹೊರಟು ಬಂದನು. ಬರುವಾಗ ಶ್ರೀರಾಮನ ಪಾದುಕೆಗಳನ್ನು ತಂದು ಸಿಂಹಾಸನದ ಮೇಲೆ ಇಟ್ಟು ಅವಕ್ಕೆ ಸಂಪ್ರದಾಯದಂತೆ ಪಟ್ಟಾಬೀಷೆಕ ಮಾಡಿದನು. ನಂತರದಲ್ಲಿ ವನವಾಸ ಮತ್ತು ಅಜ್ಞಾತವಾಸ ಮುಗಿಸಿ ಶ್ರೀರಾಮ ರಾಜ್ಯಕ್ಕೆ ಬಂದಾಗ, ಅಲ್ಲಿರುವ ಭರತನ ಸಹೋದರ ವಾತ್ಸಲ್ಯ ಕಂಡ ಶ್ರೀರಾಮನು ಬೆರಗಾದನು ಮುಂದೆ ಭರತನು ರಾಮನನ್ನು ತಬ್ಬಿಕೊಂಡು ರಾಮನಿಗೆ ಸಿಂಹಾಸನದ ಮೇಲೆ ಕುಳಿತುಕೊಳ್ಳವಂತೆ ಮಾಡಿದನು.

ಈ ನಾಟಕದಲ್ಲಿ ಬರುವ ಒಂದು ಪ್ರಮುಖ ಪ್ರಸಂಗ ಸೀತಾ ಸ್ವಂಯವರ, ಈ ಸಂದರ್ಭದಲ್ಲಿ, ನಾಡಿನಿಂದ ಹಲವಾರು ರಾಜ ಮಹಾರಾಜರು ಸೀತೆಯನ್ನು ವಿವಾಹ ಮಾಡಿಕೊಳ್ಳಬೇಕೆಂದು ಬಂದಿದ್ದರು. ನೀರಿನ ಹೊಂಡದಲ್ಲಿರುವ ಮೀನಿನ ನೇರಳನ್ನು ನೋಡಿ ಮೇಲೆ ಕಟ್ಟಿದ ಮೀನನ್ನು ಯಾರು ಭೇದಿಸುವರೋ ಅವರಿಗೆ ನನ್ನ ಮಗಳನ್ನು ದಾರೆ ಎರೆದು ಕೊಡುತ್ತೇನೆ. ಎಂದು ಜನಕ ಮಹಾರಾಜನು ಹೇಳಿದಾಗ ಶ್ರೀರಾಮನನ್ನು ಹೊರತು ಪಡಿಸಿ, ಯಾರು ಭೇದಿಸಲಿಲ್ಲ. ಶ್ರೀರಾಮ ಸಭೆಯ ಮದ್ಯ ಬಂದು ಸೀತೆಯ ಕಡೆಗೆ ನೋಡುತ್ತ ಬಾಣವನ್ನು ಎರಡೂ ಕೈಗಳಿಂದ ಎಬ್ಬಿಸಿ ಒಂದು ಕೈಯಿಂದ ಬಾಣ

ಹಿಡಿದು ಮತ್ತೊಂದು ಕೈಯಿಂದ ಬಿಲ್ಲು ಹಿಡಿದು ರೋಷದಿಂದ ಭುಜದ ವರೆಗೆ ಜಗ್ಗಿ ಬೇಧಿಸಿದನು, ಈತನ ಪೌರುಷ ಮೆಚ್ಚಿದ ಜನಕ ಮಹಾರಾಜ ಸೀತೆಯನ್ನು ಶ್ರೀರಾಮನಿಗೆ ದಾರೆ ಎರೆದು ವಿವಾಹ ಮಾಡಿ ಕೊಟ್ಟನು.

ಹೀಗೆ ಈ ನಾಟಕದಲ್ಲಿ ಶ್ರೀ ಸಿದ್ದಗಿರಿ ಸ್ವಾಮಿಗಳು ಶ್ರೀರಾಮನ ಪಾತ್ರದಲ್ಲಿ ಅಭಿನಯಿಸಿದರು, ಅವರ ಪಾತ್ರದ ವೈಖರಿಯು ಬಹಳ ಸೊಗಸಾಗಿ ಕಂಡು ಬರುತ್ತಿತ್ತು. ಸೀತಾ ಸ್ವಯಂವರದಲ್ಲಿ ಸಿದ್ದಗಿರಿ ಸ್ವಾಮಿಗಳು ಶ್ರೀರಾಮನ ಪಾತ್ರದಲ್ಲಿ ವೇಷ ಧರಿಸಿ ಬರುವ ಠೀವಿ, ಅವರು ಬಾಣಕ್ಕೆ ವಂದಿಸುವ ಹಾಗೂ ಸಿಂಹಾಸನದ ಮೇಲೆ ಕುಳಿತ ಸೀತೆಯನ್ನು ನೋಡುವ ನೋಟ, ಎರಡೂ ಕೈಗಳಿಂದ ಬಾಣ ಮೇಲೆ ಎಬ್ಬಿಸುವ ದೃಶ್ಯ ನೋಡಿದರೆ, ಪ್ರತಿಯೊಬ್ಬರ ಮೈಕೂದಲು ನಿವಿರೇಳುತ್ತಿದ್ದವು. ಅಂದರೆ ಆ ಸನ್ನಿವೇಶ ಅಷ್ಟೊಂದು ಗಾಂಬಿರ್ಯತೆಯಿಂದ ತುಂಬಿತ್ತು. ಬಾಣ ಎಬ್ಬಿಸುವ ದೃಶ್ಯದಲ್ಲಿ ಪ್ರೇಕ್ಷಕರು ಕುಳಿತಲ್ಲಿಯೇ ಬಾರ ಎಬ್ಬಿಸುವ ಸಂದರ್ಭದಲ್ಲಿ ಹೇಗೆ ಮುಖ ಗಂಟ್ಹಾಕುವರೋ ಅದೇ ರೀತಿ ಸಿದ್ದಗಿರಿ ಸ್ವಾಮಿಗಳು ಮಾಡುವ ಅಭಿನಯದಿಂದ ಆ ಸನ್ನಿವೇಶ ನೋಡಿದ ಕೂಡಲೇ ಕುಳಿತಲ್ಲಿಯೇ ಹಲ್ಲು ಕರಕರ ಕಚ್ಚುತ್ತ ಮುಖಗಂಟಾಕಿಕೊಂಡು ಬೆವರುತಿದ್ದರೆಂದು ಪ್ರೇಕ್ಷಕರೇ ಹೇಳುವರು. ಅಂದರೆ ಅಭಿನಯವು ಅಷ್ಟೊಂದು ಪೌರುಷತೆಯಿಂದ ಕಂಡುಬರುತ್ತಿತ್ತು. ಈ ಅಭಿನಯವನ್ನು ಶ್ರೀ ಸಿದ್ದಗಿರಿ ಸ್ವಾಮಿಗಳಿಂದ ನೋಡಬೇಕು. ಎಂದು ಜನ ಈಗಲೂ ಮಾತನಾಡುತ್ತಾರೆ.

---

ಶ್ರೀ ರಾಮ ಪಾದುಕಾ ಪಟ್ಟಾಭಿಷೇಕ ಕಥಾಸಾರವನ್ನು ಪ್ರೇಕ್ಷಕ ವರ್ಗದವರಿಂದ ಹಾಗೂ ಹುನ್ನೂರಿನ ನಾಟಕ ಕಂಪನಿ ಹಾರ್ಮೋನಿಯಂ ಮಾಸ್ತರರಾದ ಶ್ರೀ ಹಣಮಂತ ಜಾಧವ ಅವರ ಸಂದರ್ಶನದಿಂದ ಕೇಳಲಾಯಿತು.



ಶ್ರೀ ರಾಮನ ಪಾತ್ರದಲ್ಲಿ ಶ್ರೀ ಸಿದ್ಧಗಿರಿ ಸ್ವಾಮಿಗಳು

## ಅಣ್ಣ – ತಮ್ಮ

**ಸಾರಾಂಶ**

ಅಣ್ಣ – ತಮ್ಮ ಈ ನಾಟಕವು ಎಚ್. ಟಿ. ಮಹಾಂತೇಶರಿಂದ ರಚಿತವಾಗಿದೆ. ಈ ನಾಟಕವನ್ನು ಮೈಸೂರ ದಸರಾದ ಉತ್ಸವದಲ್ಲಿ ಶ್ರೀ ಮಲ್ಲಿಕಾರ್ಜುನ ನಾಟ್ಯ ಸಂಘ ಜಮಖಂಡಿ ಯವರು ಪ್ರದರ್ಶನ ಮಾಡಿದರು. ಈ ನಾಟಕದ ವೈಶಿಷ್ಠ್ಯತೆ ಕಂಡ ಪ್ರೇಕ್ಷಕ ವರ್ಗದವರು ಎಲ್ಲ ಪಾತ್ರದಾರಿಗಳನ್ನು ಆನೆಯ ಮೇಲೆ ಮೆರವಣಿಗೆ ಮಾಡಿದರು.

ಈ ನಾಟಕದಲ್ಲಿ ಮೂರು ಜನ ಸಹೋದರರ ಅವಿಭಕ್ತ ಕುಟುಂಬ. ಈ ಮನೆತನವು ನೋಡಲು ಬಹಳ ಶ್ರೀಮಂತಿಕೆಯಿಂದ ಕೂಡಿತ್ತು ಹಿರಿಯ ಸಹೋದರ ಸತ್ಯೇಂದ್ರ ಈತನ ಪತ್ನಿ ಅನಲಾಯಿ ಇವಳು ಗುಣದಲ್ಲಿ ಬಹಳ ಸಾಧ್ವಿ, ಸತ್ಯೇಂದ್ರನು ತನ್ನ ಇಬ್ಬರೂ ಸಹೋದರರನ್ನು ಅತ್ಯಂತ ಪ್ರೀತಿ ವಾತ್ಸಲ್ಯದಿಂದ ನೋಡುತ್ತಿದ್ದನು, ಅವರ ಶಿಕ್ಷಣ ಅವಶ್ಯವಿರುವ ಎಲ್ಲಾ ಖರ್ಚಿನ ಅನುಕೂಲಗಳನ್ನು ನೋಡಿಕೊಳ್ಳುತ್ತಿದ್ದನು. ಸತ್ಯೇಂದ್ರನ ಎರಡನೆಯ ತಮ್ಮ ಶೈಲೇಂದ್ರನು ವೈದ್ಯಕೀಯ ಶಿಕ್ಷಣ ಕಲೆಯಲು ಬೆಂಗಳೂರಿಗೆ ಹೋಗಿದ್ದನು. ಇನ್ನೊಬ್ಬ ಕೊನೆಯ ಸಹೋದರ ರವೀಂದ್ರನು – ತಮ್ಮ ಊರಿನಲ್ಲಿಯೇ ಶಿಕ್ಷಣ ಪಡೆಯುತ್ತಿದ್ದನು. ಈತ ನೋಡಲು ಬಹಳ ಮುತ್ಸದ್ಧಿಯಾಗಿದ್ದ. ಬೆಂಗಳೂರಿನಲ್ಲಿ ವೈದ್ಯಕೀಯ ಶಿಕ್ಷಣ ಪಡೆಯಲು ಹೋಗಿದ್ದ ಶೈಲೇಂದ್ರನು, ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಓದುವಾಗ ತನ್ನ ಜೊತೆಯಲ್ಲಿಯೇ ಕಲಿತ ಶೋಭಾ ಎಂಬ ಹುಡುಗಿಯನ್ನು ಪ್ರೀತಿಸಿದನು. ಪರಸ್ಪರ ಇಬ್ಬರೂ ಪ್ರೀತಿಸಿ ಪ್ರೇಮವಿವಾಹವಾದರು. ಮುಂದೆ ಹಲವು ದಿನಗಳು ಗತಿಸಿದ ಮೇಲೆ ಊರಿಗೆ ಬಂದರು ನಂತರ ಹಿರಿ ಅಣ್ಣನಾದ ಸತ್ಯೇಂದ್ರ ಹಾಗೂ ಆತನ ಪತ್ನಿ ಅನಲಾಯಿಗೆ ಮತ್ತು ಕಿರಿಯ ಸಹೋದರನಿಗೆ ತಿಳಿಯಿತು. ಇವರ ಕುಟುಂಬ ಊರಿನಲ್ಲಿಯೇ ದೊಡ್ಡ ಕುಟುಂಬ ಹಾಗೂ ಪ್ರತಿಷ್ಠಿತ ಕುಟುಂಬವಾದ್ದರಿಂದ ಮನೆಯ ಮರ್ಯಾದೆ ಹೋಗಬಾರದೆಂದು, ಎಲ್ಲರು ಒಪ್ಪಿ ಒಂದಾಗಿದ್ದರು. ಹೀಗಿರುವಾಗ ಒಮ್ಮೆ ಆ ಕುಟುಂಬದಲ್ಲಿ ಒಂದು ದುರ್ಘಟನೆ ನಡೆಯಿತು. ಶೈಲೇಂದ್ರನ ಗೆಳೆಯ ಗಜೇಂದ್ರನು ಸತ್ಯೇಂದ್ರನ ಮನೆಗೆ ಬಂದನು. ಆ ಸಮಯದಲ್ಲಿ ಮನೆಯಲ್ಲಿ ಶೋಭಾ ಮಾತ್ರ ಇದ್ದಳು. ಯಾರೊಬ್ಬರೂ ಇರಲಿಲ್ಲ. ಬಂದ ದುಷ್ಟ ಬುದ್ದಿಯ ಗಜೇಂದ್ರನು ಒಂಟಿಯಾಗಿರುವ ಶೋಭಾಳ ಮನವಲಿಸಿ ಅವಳ

ಜೊತೆಯಲ್ಲಿ ಸರಸ ಸಲ್ಲಾಪ ಮಾಡುವುದನ್ನು ಹಾಗೂ ಪರಸ್ಪರ ಅಪ್ಪಿಕೊಳ್ಳುವುದನ್ನು ಹಿರಿಯಣ್ಣನ ಪತ್ನಿ ಅನಲಾಯಿ ನೋಡಿದಳು.

ಈ ವಿಷಯ ಮನೆಯಲ್ಲಿ ಪತಿಗೆ ಹಾಗೂ ಹಿರಿ ಮಾವನಿಗೆ ಹೇಳುವಳು ಎಂದು ಶೋಭಾ ಮತ್ತು ಗಜೇಂದ್ರ ಇಬ್ಬರೂ ಇಲ್ಲದ-ಸಲ್ಲದ ಅಪವಾದ ಹೊರಸಿ ಅನಲಾಯಿಯನ್ನು ಮನೆಯಿಂದ ಹೊರಗೆ ದಬ್ಬುವರು. ಈ ಸಂಗತಿ ತಿಳಿದ ಕೊನೆಯ ಸಹೋದರ ಕೂಡ ಹಿರಿ ಅಣ್ಣ, ಅತ್ತಿಗೆ ಹೋದ ಮೇಲೆ ನನ್ನದೇನಿದೆ ಎಂದು ಆತನೂ ಸಹ ಇಬ್ಬರೂ ಅಣ್ಣಂದಿರನ್ನು ಅಗಲಿದನು. ಬಿ. ಎ. ಪದವಿ ಪಡೆದ ರವೀಂದ್ರನು ಸಬ್ ಇನ್ಸ್ ಪೆಕ್ಟರ್ ಹುದ್ದೆ ಹಿಡಿದು. ತಮ್ಮ ಕುಟುಂಬದಲ್ಲಿ ನಡೆದ ಅನ್ಯಾಯವನ್ನು ಬಯಲಿಗೆಳಿಯಬೇಕೆಂದು ಬಂದನು. ರವೀಂದ್ರನು ಗಜೇಂದ್ರ ಹಾಗೂ ಶೋಭಾಳ ಹೀನ ಕೃತ್ಯ ಕಂಡು ಹಿಡಿದು, ತನ್ನ ಸಹೋದರರ ಮುಂದೆ ಹೇಳಿ ಗಜೇಂದ್ರನಿಗೆ ಶಿಕ್ಷೆ ವಿಧಿಸಿದನು. ಅಷ್ಟೇ ಅಲ್ಲದೆ ಮನೆ ತೊರೆದು ಹೋದ ಹಿರಿ ಅಣ್ಣ ಮತ್ತು ಅತ್ತಿಗೆಯನ್ನು ಒಂದು ಗೂಡಿಸಿ ಮನೆಗೆ ಕರೆತಂದನು. ಛಿದ್ರವಾಗಿರುವ ಅವರ ಕುಟುಂಬ ಮತ್ತೆ ಒಂದಾಯಿತು.

ಈ ನಾಟಕದಲ್ಲಿ ಶ್ರೀ ಸಿದ್ದಗಿರಿ ಸ್ವಾಮಿಗಳು ಅನಲಾಯಿ ಪಾತ್ರದ ವೈಖರಿ ಅಪರೂಪದ್ದಾಗಿತ್ತು. ಜನರ ಕಣ್ಮನ ಸೆಳೆಯುವ ನೋಟ ಹಾಗೂ ಅವರ ದುಃಖದ ಸನ್ನಿವೇಶ ನೋಡಿದ ಪ್ರೇಕ್ಷಕರು ಕಂಬನಿಗರೆಯದೆ ಹೋಗುತ್ತಿರಲಿಲ್ಲ. ಮಧುರಖಂಡಿಯಲ್ಲಿರುವ ನಾಟಕ ನೋಡಿದ ಅನೇಕ ಪ್ರೇಕ್ಷರು ಹೇಳಿದ ಅನುಭವ ವಿದು.

---

ಕಲಾಭಿಮಾನಿಗಳಿಂದ ತಿಳಿದುಕೊಂಡ ಮಾಹಿತಿ.

ಜೊತೆಯಲ್ಲಿ ಸರಸ ಸಲ್ಲಾಪ ಮಾಡುವುದನ್ನು ಹಾಗೂ ಪರಸ್ಪರ ಅಪ್ಪಿಕೊಳ್ಳುವುದನ್ನು ಹಿರಿಯಣ್ಣನ ಪತ್ನಿ ಅನಲಾಯಿ ನೋಡಿದಳು.

ಈ ವಿಷಯ ಮನೆಯಲ್ಲಿ ಪತಿಗೆ ಹಾಗೂ ಹಿರಿ ಮಾವನಿಗೆ ಹೇಳುವಳು ಎಂದು ಶೋಭಾ ಮತ್ತು ಗಜೇಂದ್ರ ಇಬ್ಬರೂ ಇಲ್ಲದ-ಸಲ್ಲದ ಅಪವಾದ ಹೊರಸಿ ಅನಲಾಯಿಯನ್ನು ಮನೆಯಿಂದ ಹೊರಗೆ ದಬ್ಬುವರು. ಈ ಸಂಗತಿ ತಿಳಿದ ಕೊನೆಯ ಸಹೋದರ ಕೂಡ ಹಿರಿ ಅಣ್ಣ, ಅತ್ತಿಗೆ ಹೋದ ಮೇಲೆ ನನ್ನದೇನಿದೆ ಎಂದು ಆತನೂ ಸಹ ಇಬ್ಬರೂ ಅಣ್ಣಂದಿರನ್ನು ಅಗಲಿದನು. ಬಿ. ಎ. ಪದವಿ ಪಡೆದ ರವೀಂದ್ರನು ಸಬ್ ಇನ್ಸ್ ಪೆಕ್ಟರ್ ಹುದ್ದೆ ಹಿಡಿದು. ತಮ್ಮ ಕುಟುಂಬದಲ್ಲಿ ನಡೆದ ಅನ್ಯಾಯವನ್ನು ಬಯಲಿಗೆಳಿಯಬೇಕೆಂದು ಬಂದನು. ರವೀಂದ್ರನು ಗಜೇಂದ್ರ ಹಾಗೂ ಶೋಭಾಳ ಹೀನ ಕೃತ್ಯ ಕಂಡು ಹಿಡಿದು, ತನ್ನ ಸಹೋದರರ ಮುಂದೆ ಹೇಳಿ ಗಜೇಂದ್ರನಿಗೆ ಶಿಕ್ಷೆ ವಿಧಿಸಿದನು. ಅಷ್ಟೇ ಅಲ್ಲದೆ ಮನೆ ತೊರೆದು ಹೋದ ಹಿರಿ ಅಣ್ಣ ಮತ್ತು ಅತ್ತಿಗೆಯನ್ನು ಒಂದು ಗೂಡಿಸಿ ಮನೆಗೆ ಕರೆತಂದನು. ಛಿದ್ರವಾಗಿರುವ ಅವರ ಕುಟುಂಬ ಮತ್ತೆ ಒಂದಾಯಿತು.

ಈ ನಾಟಕದಲ್ಲಿ ಶ್ರೀ ಸಿದ್ದಗಿರಿ ಸ್ವಾಮಿಗಳು ಅನಲಾಯಿ ಪಾತ್ರದ ವೈಖರಿ ಅಪರೂಪದ್ದಾಗಿತ್ತು. ಜನರ ಕಣ್ಮನ ಸೆಳೆಯುವ ನೋಟ ಹಾಗೂ ಅವರ ದುಃಖದ ಸನ್ನಿವೇಶ ನೋಡಿದ ಪ್ರೇಕ್ಷಕರು ಕಂಬನಿಗರೆಯದೆ ಹೋಗುತ್ತಿರಲಿಲ್ಲ. ಮಧುರಖಂಡಿಯಲ್ಲಿರುವ ನಾಟಕ ನೋಡಿದ ಅನೇಕ ಪ್ರೇಕ್ಷರು ಹೇಳಿದ ಅನುಭವ ವಿದು.

---

ಕಲಾಭಿಮಾನಿಗಳಿಂದ ತಿಳಿದುಕೊಂಡ ಮಾಹಿತಿ.

# ಕುರುಕ್ಷೇತ್ರ

**ಸಾರಾಂಶ**

ಹದಿನೆಂಟು ದಿನಗಳವರೆಗೆ ಘನಘೋರವಾಗಿ ನಡೆದ ಮಹಾಭಾರತದ ಸಂಗ್ರಾಮವು ಪೂರ್ಣವಾಗಿ ಮುಗಿದ ದಿನದ, ವಿಷಮ ರಾತ್ರಿಯೇ ಈ ನಾಟಕದ ವಸ್ತು. ಇಲ್ಲಿ ವಿಸ್ತಾರವಾಗಿರುವ ಆ ರಣ ಭೂಮಿಯ ಬಯಲು ಪ್ರದೇಶದಲ್ಲಿ ಕಗ್ಗತ್ತಲು ತುಂಬಿಕೊಂಡಿದೆ. ಕೋಟ್ಯಾನು–ಕೋಟಿ ಸೈನಿಕರ ಶವಗಳೂ ಅಷ್ಟೇ ಅಲ್ಲದೆ ಅಸಂಖ್ಯವಾದ ಗಜದಳ, ಕುದುರೆಗಳು, ತೇರುಗಳೂ ಮುದ್ದೆ ಮುದ್ದೆಯಾಗಿ ನಷ್ಟ ಹೊಂದಿ ಆ ವಿಸ್ತಾರವಾದ ಬಯಲಿನಲ್ಲಿ ಬಿದ್ದಿವೆ. ಸಾಯುವವರೂ ಗಾಯಪಟ್ಟವರೂ ನರಳುತ್ತಿದ್ದಾರೆ. ಇರುಳಿನ ಗರ್ಭದಿಂದ ಹೊರಬಂದ ಆ ಬೀಕರವಾದ ಧ್ವನಿ ಕುರುಕ್ಷೇತ್ರವನೆಲ್ಲ ಆವರಿಸಿಕೊಂಡಿದೆ. ಆದರೂ ಸಹ ಆ ಸಂಕಟದ ಧ್ವನಿಯನ್ನು ತಿಂದು ತೇಗುವಂತೆ ಯಾವದೋ ಒಂದು ಭಯಾನಕವಾದ ಮೃತ್ಯುಮೌನವು ಆ ರುದ್ರ ಪ್ರದೇಶದಲ್ಲಿ ಸಂಚರಿಸಿದಂತೆ ಕಂಡುಬರುತ್ತಿದೆ. ಹೆಪ್ಪುಗಟ್ಟಿದಂತಿರುವ ಆ ಕತ್ತಲು ಪ್ರದೇಶದಲ್ಲಿ ಮತ್ತು ವಿಸ್ತಾರವಾದ ಕುರುಕ್ಷೇತ್ರ ಬಯಲಿನ ತುಂಬ ಸಾವಿರಾರು ಮನುಷ್ಯ ವ್ಯಕ್ತಿಗಳು ಅರೆಮುಸುಕು ಹಾಕಿಕೊಂಡು ಕೈಯಲ್ಲಿ ಸೊಡರು ಹಿಡಿದು ಏನನ್ನೊ ಹುಡುಕುವಂತೆ ಅಲ್ಲಲ್ಲಿ ಸುಳಿದಾಡುತ್ತಿದ್ದಾರೆ. ಅವರು ಮಹಾಭಾರತ ಯುದ್ಧದಲ್ಲಿ ಯುದ್ಧ ಮಾಡಿ ಮಡಿದವರ ಬಂಧು–ಬಾಂಧವರುಗಳು, ತಂದೆ, ತಾಯಂದಿರು, ಅಣ್ಣ–ತಮ್ಮಂದಿರು, ಅಕ್ಕ–ತಂಗಿಯರು, ಸತಿಯರು, ಮಕ್ಕಳು, ಮುದುಕರು. ಕೌರವ ಪಾಂಡವ ಪಕ್ಷದವರು ಅಂದು ಕುರುಕ್ಷೇತ್ರದಲ್ಲಿ ಭೇದಭಾವವಿಲ್ಲದೆ ತಮ್ಮ ತಮ್ಮ ಬಂಧುಗಳ ದೇಹಗಳನ್ನು ಅರಸುತ್ತಿದ್ದರೆ, ಎತ್ತ ನೋಡಿದರತ್ತ ದುಃಖದಿಂದ ತುಂಬಿದ ರುದ್ರ ದೃಶ್ಯ ಅಲ್ಲಿತ್ತು. ಆ ದಿನ ಸಂಜೆಯ ಸಮಯದಲ್ಲಿ ಭೀಮ, ದುರ್ಯೋಧನರ ಗದಾಯುದ್ದವು ಪೂರೈಸಿದೆ ಕೌರವೇಂದ್ರನು ತೊಡೆಯೊಡೆದು ಮುಡಿವಡಿದು ವೈಂಶಂಪಾಯನ ಸರಸ್ಸಿನ ತೀರದಲ್ಲಿ ನರಳುತ್ತ ಇನ್ನೂ ಜೀವದಿಂದಿದ್ದಾನೆ. ಆ ದಿನದ ರಾತ್ರಿಯು ದ್ವಾಪಾರಯುಗ ಮುಗಿದು ಕಲಿಯುಗ ಪ್ರಾರಂಭ ವಾಗುವುದು. ತನ್ನ ಸುತ್ತಲೂ ಎಲ್ಲೆ ತೋರದೆ ಹಬ್ಬಿರುವ ಹೆಮ್ಮಸಣವನು ಎವೆಯಿಕ್ಕದೆ ನೋಡುತ್ತ ದ್ವಾಪಾರನ ಅಂತರ್ಮುಖಿಯಾಗಿ ನಿಲ್ಲುವನು. ಅಲ್ಲಿ ಕಲಿ ಪುರುಷನು ಆಗಮಿಸಿ ಸುತ್ತಲೂ ದೃಷ್ಟಿಸಿ ನೋಡಿ ದೂರದಲ್ಲಿ ನಿಂತ ದ್ವಾಪಾರದೇವನನ್ನು ಗುರುತಿಸಿ ಮೆಲ್ಲನೆ ಅವನ ಬಳಿ ಬರುತ್ತಾನೆ. ಆತನಿಗೆ ತುಸು ಹತ್ತಿರ

ನಿಂತ ಸ್ವಲ್ಪ ಹೊತ್ತು ನಿರೀಕ್ಷಿಸುತ್ತಾನೆ ದ್ವಾಪಾರನು ಯಾವುದೋ ವಿಚಾರದಲ್ಲಿ ತಲ್ಲೀನನಾಗಿ ಪ್ರಪಂಚವನ್ನೇ ಮರೆತು ಬಿಟ್ಟಿರುವವನೆಂದು ತಿಳಿದು ಗಂಭೀರವಾಗಿ ಆತನನ್ನು ಕುರಿತು ಸಂಬೋದಿಸುವನು.

ಕುರುಕ್ಷೇತ್ರದ ಮತ್ತೊಂದೆಡೆ ಸಂಜಯನೊಡಗೂಡಿ ದೃತರಾಷ್ಟ್ರನೂ ಗಾಂಧಾರಿಯೂ ಬರುತ್ತಾರೆ. ಗದಾಯುದ್ಧದಲ್ಲಿ ಭೀಮನಿಂದ ಪರಾಜಿತನಾದ ಕೌರವನು ಎಲ್ಲಿರುವನೆಂದು ಹುಡುಕಿಕೊಂಡು ಹೋಗುತ್ತಿದ್ದಾರೆ.

ಕುರಕ್ಷೇತ್ರದ ಮಗದೊಂದೆಡೆಗೆ ಧರ್ಮರಾಯ, ಭೀಮ, ಅರ್ಜುನ, ದ್ರೌಪದಿ, ಮೊದಲಾದರು ಬರುತ್ತಾರೆ ಘಟೋತ್ಕಚ, ಅಭಿಮನ್ಯು ಮೊದಲಾದ ನೆಂಟರಿಷ್ಟರ ಅನ್ವೇಷಣೆಗಾಗಿ ಧರ್ಮರಾಯನು ಕುರುಕ್ಷೇತ್ರವನ್ನು ನೋಡಿ ದುಗುಡದಿಂದ ನಿಟ್ಟುಸಿರು ಬಿಡುತ್ತಾನೆ. ಎರಡು ಹಜ್ಜೆ ಹಿಂದೆ ಸರಿಯುತ್ತಾನೆ. ಕಲಿ ದ್ವಾಪಾರನನೇ ನೋಡಿ ಬೆರಗಾಗುತ್ತಾನೆ. ವೈಶಂಪಾಯನ ಸರೋವರದ ತೀರದಲ್ಲಿ ಕತ್ತಲೆ ಕವಿದು ಕೊಂಡಿದೆ ಮೇಲೆಲ್ಲಾ ವಿಸ್ತಾರವಾಗಿ ಹಬ್ಬಿಕೊಂಡಿರುವ ನೀಲಿಮಾ ವತಾನದಂತೆ ತೋರುವ ದ್ವಾಪಾರಯುಗದ ಮುಗಿಯುತ್ತ ಬಂದಿದೆ. ಸರೋವರದ ಸುತ್ತ ಮುತ್ತಲು ಕುರುಕ್ಷೇತ್ರದಲ್ಲಿ ಕರಾಳವಾದ ದೃಶ್ಯವಿದೆ ಆ ಸರೋವರದ ತೀರದಲ್ಲಿ ಕೌರವೇಂದ್ರನು ಊರುಭಂಗ ಕಿರೀಟಭಂಗವಾಗಿ ನೋವಿಗೂ ಅವಮಾನಕ್ಕೂ ವಿಷಾದಿಸುತ್ತ ಬಿದ್ದಿದ್ದಾನೆ. ಮಸಣದೊಂದೆಡೆ ಕೃಷ್ಣನೂ ವಿದುರನೂ ಮಾತನಾಡುತ್ತಾ ನಿಂತಿದ್ದಾರೆ ಹಾಗೂ ಕುರುಕ್ಷೇತ್ರದ ಒಂದು ಭಾಗದಲ್ಲಿ ಪಾಂಡವ ಪಕ್ಷದವರ ಚಿತೆ ನೊಡಿ ಭೀಮ, ಅರ್ಜುನ, ಧರ್ಮರಾಯ ದ್ರೌಪದಿ, ಎಲ್ಲರೂ ಶೋಕತಪ್ತರಾಗಿ ನಿಂತಿದ್ದಾರೆ. ಸೂಡಿನ ಮೇಲೆ ಅಭಿಮನ್ಯು ಮತ್ತು ಘಟೋತ್ಕಚರೇ ಮೊದಲಾದವರ ಶವಗಳನ್ನು ಹಾಕಿದ್ದಾರೆ. ಇದುವರೆಗೂ ಕಲ್ಲಿನಂತೆ ಮನಸ್ಸಿರುವ ಭೀಮನಿಗೆ ಇಂದು ಸೂಡಿನ ಮೇಲಿದ್ದ ಘಟೋತ್ಕಚನ ಶವವನ್ನು ನೋಡಿದ ಮೇಲೆ ನೋವು ಮೀತಿಮಿರಿ ಹೋಗಿದೆ. ಅಸ್ಪಷ್ಟರೋಧನ ಧ್ವನಿ ಸುತ್ತಮುತ್ತಲು ವ್ಯಾಪಿಸಿಕೊಂಡಿದೆ. ಕುರುಕ್ಷೇತ್ರದಲ್ಲಿ ಎಲ್ಲಿನೋಡಿದಲ್ಲೆಲ್ಲ ಕತ್ತಲುಕವಿದಿದೆ. ಎಲ್ಲಿಯೂ ಪಂಜುಗಳ ಬೆಳಕಿಲ್ಲ, ಸುಳಿದಾಡುವ ಮನುಷ್ಯರಿಲ್ಲ ಎಲ್ಲವೂ ಬಟ್ಟಬಯಲಾಗಿದೆ ನಕ್ಷತ್ರಪುಂಜಗಳ ಮಂದಕಾಂತಿ ನಸುಹಬ್ಬಿ ಈ ದೃಶ್ಯವನ್ನು ಭಯಾನಕವನ್ನಾಗಿ ಮಾಡಿಬಿಟ್ಟಿದೆ. ಮಸಣದ ನಡುವೆ ಅಕ್ಕ ಪಕ್ಕದಲ್ಲಿ ಎರಡು ಭಸ್ಮರಾಶಿಗಳಿವೆ. ಒಂದು ಪಾಂಡವ ಪಕ್ಷ ವಿನ್ಯಾಸದ ಪ್ರತಿನಿಧಿ ಇನ್ನೊಂದೆಡೆ ಕೌರವಪಕ್ಷ

ವಿನ್ಯಾಸದ ಪ್ರತಿನಿಧಿ "ಆ ಒಂದೊಂದು ಭಸ್ಮ ಪರ್ವತದ ಮೇಲೆ ಒಂದೊಂದು ಕಾಲಿಟ್ಟುಕೊಂಡು ರುದ್ರಲಯಮೂರ್ತಿಯಾದ ಮಹಾದೇವನು ಉನ್ಮತ್ತನಾಗಿ ಭೀಮಾಕಾರನಾಗಿ ನಿಂತಿದ್ದಾನೆ ಮುಡಿಗೆದರಿ ಹೋಗಿದೆ ಕೊರಳಿನಲ್ಲಿರುವ ಹಾವುಗಳು ಭಯದಿಂದ ಹುದುಗಿಕೊಂಡಿವೆ, ಹುಲಿಯ ಚರ್ಮವನ್ನು ತೊಟ್ಟಿದ್ದಾನೆ ತ್ರಿಶೂಲ ಡಮರುಗ ದಾರಿಯಾಗಿದ್ದಾನೆ ಬೂದಿಯ ರಾಶಿಗಳಿಂದ ಆಗಾಗ ಬೂದಿ ತೆಗೆದುಕೊಂಡು ಬಳಿದುಕೊಳ್ಳುತ್ತಾನೆ ಒಂದೊಂದು ಸಾರಿ ಬಳಿದುಕೊಳ್ಳುವಾಗಲೂ ಮಹಾಭಾರತದ ಒಬ್ಬೊಬ್ಬ ವೀರ ಪುರುಷನ ಹೆಸರನ್ನು ಕೂಗುತ್ತಾನೆ. ಎಲ್ಲೆಲ್ಲಿಯೂ ನಿಶಬ್ದವಾದ ವಾತಾವರಣ ಭೀಕರವಾಗಿದೆ, ಹಾಗೂ ಗಂಭೀರವಾಗಿದೆ ಮತ್ತು ರೌದ್ರವಾಗಿದೆ.[೩]

ಈ ಸನ್ನಿವೇಷದಲ್ಲಿ ಶ್ರೀ ಸಿದ್ಧಗಿರಿ ಸ್ವಾಮಿಗಳು ಕೃಷ್ಣನ ಪಾತ್ರದಲ್ಲಿ ವೇಷಹಾಕಿಕೊಂಡು, ತಲೆಯ ಮೇಲೆ ಕಿರೀಟ ಅದಕ್ಕೆ ಅಂಟಿಸಿದ ನವಿಲ ಗರಿ ಮತ್ತು ತೋಳಿಗೆ ಮಣಿಕಂಠ ಹಾರ ನಡುಪಟ್ಟಿ ಮತ್ತು ಕೈಯಲ್ಲಿ ಚಕ್ರ ಹಿಡಿದು ರಂಗಮಂಟಪದ ಮೇಲೆ ಬಂದರೆ ನೋಡುವ ಪ್ರೇಕ್ಷಕ ವರ್ಗದವರು ಸಾಕ್ಷಾತ ಶ್ರೀ ಕೃಷ್ಣ ಪರಮಾತ್ಮನೆ ಬಂದನೆಂದು ಕೈಮುಗಿಯುತ್ತಿದ್ದರು. ರಂಗಮಂಟಪದ ಮೇಲೆ ಕೌರವ ಪಾಂಡವರ ಸಂಧಾನ ಮಾಡುವ ದೃಶ್ಯ ಹಾಗೂ ರೌದ್ರಭೂಮಿಯಲ್ಲಿ ದುರ್ಯೋಧನ ಹಾಗೂ ಭೀಮರ ಕಾಳಗದ ಸಂದರ್ಭದಲ್ಲಿ ವಜ್ರಖಚಿತದೇಹ ಹೊಂದಿರುವ ದುರ್ಯೋಧನನ ಊರು ಭಂಗ ಮಾಡುವಂತೆ ಭೀಮನಿಗೆ ತೊಡೆ ತಟ್ಟಿ ಹೇಳುವ ಸನ್ನಿವೇಷದಲ್ಲಿ ಸಿದ್ದಗಿರಿಸ್ವಾಮಿಗಳ ಅಭಿನಯ ಅದ್ಭುತವಾಗಿ ಕಂಡುಬರುತ್ತಿತ್ತು. ಊರುಭಂಗವಾಗಿ ಬಿದ್ದ ದುರ್ಯೋದನನಿಗೆ ಕೆಣಕಿ ಹೀಗೆ ಹೇಳುವನು 'ಯುದ್ಧ ಬಯಸಿದವನು ನೀನೆ ಪಾಂಡವರಿಗೆ ಸಂದ ಅರ್ದರಾಜ್ಯ ಕೊಟ್ಟಿದ್ದರೆ ಈ ಸಂಗತಿ ನಿನಗೆ ದೊರೆಯುತ್ತಿತ್ತೆ' ಇಲ್ಲಿ ಭೀಮನನ್ನು ಮೇಲೆ ಮಾಡಿಕೊಂಡು ಹೇಳುವ ದೃಶ್ಯವಂತು ಕಣ್ಣುಕಟ್ಟುವಂತಿತ್ತು.

---

ಈ ಪಾತ್ರವೈಷ್ಟ್ಯವನ್ನು ಪ್ರೇಕ್ಷವರ್ಗದವರಿಂದ ಹಾಗೂ ಧ್ವನಿಸುರುಳಿಗಳಿಂದ ಕೇಳಿ ಸಂಗ್ರಹಿಸಲಾಗಿದೆ.




ಶ್ರೀ ಕೃಷ್ಣನ ಪಾತ್ರದಲ್ಲಿ ಶ್ರೀ ಸಿದ್ಧಗಿರಿ ಸ್ವಾಮಿಗಳು

# ಚಿತ್ರಾಂಗದಾ ನಾಟಕ

**ಸಾರಾಂಶ**

ಪಾಂಡವರು ಅರಣ್ಯಕ್ಕೆ ವನವಾಸ ಮತ್ತು ಅಜ್ಞಾತವಾಸ ಮಾಡಲು ಬಂದಾಗ, ಒಂದು ಘಟನೆ ನಡೆಯಿತು. ಅರ್ಜುನನು ಅಶ್ವಮೇದ ಯಾಗ ಕೈಗೊಂಡನು, ನಮ್ಮ ಆಸ್ಥಾನದ ಕುದುರೆ ಎಲ್ಲಿಯವರೆಗೆ ಹೋಗುತ್ತದೆಯೋ ಅಲ್ಲಿಯವರೆಗೆ ರಾಜ್ಯವಾಳಬೇಕೆಂದು ನಿಶ್ಚಯಿಸಿದನು, ಅದನ್ನು ಯಾರು ಕಟ್ಟಿ ಹಾಕುವರೋ ಅವರು ಜೊತೆಯಲ್ಲಿ ಯುದ್ದ ಮಾಡಬೇಕಂದು ತನ್ನ ಸೈನ್ಯ ಪಡೆಯನ್ನು ಕಳುಹಿಸಿದನು, ಕುದುರೆ ಮುಂದೆ–ಮುಂದೆನಡೆಯಿತು. ಸೈನಿಕರು ಹಿಂದಿನಿಂದ ನಡೆದುಕೊಂಡು ಹಿಂಬಾಲಿಸಿದರು. ಮಾರ್ಗಮದ್ಯದಲ್ಲಿ ಚಿತ್ರಾಂಗದೆಯ ಮಗ ಬಬ್ರುವಾಹನನು ಆಕಾರ್ಷಕ ವಿರುವ ಕುದುರೆಯನ್ನು ಕಟ್ಟಿ ಹಾಕಿದನು. ಬಿಡು ಎಂದು ಸೈನಿಕರು ಎಷ್ಟೆ ಹೇಳಿದರೂ ಕೇಳಲಿಲ್ಲ. ಆ ಘಟನೆ ತಿಳಿದ ಅರ್ಜುನನು ಬಂದು ಕುದುರೆಯನ್ನು ಬಿಡು ಎಂದು ಕೇಳಿದಾಗ ಬಿಡುವುದಿಲ್ಲ ಎಂದು ಹೇಳಿದಾಗ ಬಬ್ರುವಾಹನನ ಉದ್ದಟತನ ಮಾತನಾಡಿದನೆಂದು ಅರ್ಜುನ ಸಿಟ್ಟಿಗೆದ್ದು ಜಾರಣಿಯ ಮಗ ಎಂದು ಕರೆದ, ಕೋಪಗೊಂಡ ಬಬ್ರುವಾಹನ ತನ್ನ ತಾಯಿಯನ್ನು ಜಾರಣಿ ಎಂದು ಕರೆದವರನ್ನು ಬದುಕಲು ಬಿಡುವದಿಲ್ಲವೆಂದು ಘೋರ ಯುದ್ಧ ಮಾಡಿ ಅರ್ಜುನನ್ನು ಹತ್ಯೆಗೈದನು. ಚಿತ್ರಾಂಗದೆ ಬಂದು ಇವರು ನಿನ್ನ ತಂದೆ ಎಂದು ಹೇಳಿದಾಗ ಬಬ್ರುವಾಹನನ ಆವೇಶ ಕಡಿಮೆಯಾದ ಮೇಲೆ ಏನೆಂದು ತೋಚದೆ ನಿಂತನು. ಚಿತ್ರಾಂಗದೆ ಬಹಳ ರೋದಿಸುತ್ತಿದ್ದಳು, ಮುಂದೆ ದೇವರ ಸಾಕ್ಷಾತ್ಕಾರ ಪಡೆದು ಮರಳಿ ತಂದೆಯಾದ ಅರ್ಜುನನ್ನು ಬದುಕಿಸುವ ಸನ್ನಿವೇಶವಂತು ಬಹಳ ಸೊಗಸಾಗಿ ಮೂಡಿ ಬರುತ್ತಿತ್ತು.

ಈ ನಾಟಕದಲ್ಲಿ ಶ್ರೀ ಸಿದ್ದಗಿರಿ ಸ್ವಾಮಿಗಳು ಶ್ರೀ ಕೃಷ್ಣನ ಪಾತ್ರದಲ್ಲಿ ಬಹಳ ಅದ್ಭುತವಾದ ಅಭಿನಯ ನೀಡುತ್ತಿದ್ದರು. ಅವರ ಮಾತಿನ ಶೈಲಿ ಹಾಗೂ ಪಾತ್ರಕ್ಕೆ ತಕ್ಕಂತೆ ಹಾವ ಭಾವ ವಿಲಾಸ ಗಳಿಂದ ಕೂಡಿದ ನಟನೆ ಜನರ ಮನವನ್ನು ಗೆಲ್ಲುತ್ತಿತ್ತು.

---

ಈ ಕಥಾಸಾರ ಮತ್ತು ಅಭಿಯವನ್ನು ಅದೇ ನಾಟಕದ ಪಾತ್ರದಾರಿಯಾದ ಅರುಣಕುಮಾರ ಶಾ ರವರನ್ನು ಕೇಳಿ ತಿಳಿದುಕೊಳ್ಳಲಾಯಿತು.

## ಎ) ವೇಷ – ಭೂಷಣಗಳು

ಶ್ರೀ ಸಿದ್ದಗಿರಿ ಸ್ವಾಮಿಗಳ ಕಾಲದ ನಾಟಕದಲ್ಲಿ ವೇಷ ಭೂಷಣಗಳ ಬಗ್ಗೆ ವಿಶೇಷ ಕಾಳಜಿ ಇತ್ತು.

ಸಾಮಾನ್ಯವಾಗಿ ನಾಟಕದಲ್ಲಿ ಪ್ರತಿಯೋಬ್ಬ ಪಾತ್ರದಾರಿಯ ಪಾತ್ರಕ್ಕೆ ತಕ್ಕಂತೆ ವೇಷ–ಭೂಷಣ ಮಾಡಿಕೊಂಡು ಅಭಿನಯಿಸಿದರೆ ಆ ನಾಟಕಕ್ಕೆ ಒಂದು ಕಳೆಬರುವುದೆಂದು ಪ್ರೇಕ್ಷಕರ ಅಭಿಪ್ರಾಯ ವಿರುತ್ತಿತ್ತು. ಅಂತಲೇ ಮೊದಲು ಸಣ್ಣಾಟದಲ್ಲಿ ವೇಷ–ಭೂಷಣಗಳು ತೀರ ಸಾದಾ ವಿರುತ್ತಿದ್ದವು ಮುಂದೆ ಬರಬರುತ್ತ ನಾಟಕಗಳು ಹೆಚ್ಚಿದಂತೆ ಹಾಗೂ ಪಾತ್ರದಾರಿಗಳು ಹೆಚ್ಚಿದಂತೆ ಕಾಲಕ್ಕೆ ತಕ್ಕಂತೆ ಬದಲಾವಣೆಯ ರೂಪದತ್ತ ನಡೆದು ಬಂದವು. ಮುಂದೆ ಪೌರಾಣಿಕ ಸಾಮಾಜಿಕ ಆಟಗಳಲ್ಲಿ ಬಹಳಷ್ಟು ಬದಲಾವಣೆಗಳು ಕಂಡು ಬಂದಿವೆ. ಪೌರಾಣಿಕ ನಾಟಕದಲ್ಲಿ ಸ್ತ್ರೀಯರು ಬೆಲೆಯುಳ್ಳ ಪೀತಾಂಬರಗಳನ್ನು ಮೈಮೇಲೆ ತೊಟ್ಟುಕೊಳ್ಳುತ್ತಿದ್ದರು. ಉದಾ– ಕೊರಳಲ್ಲಿ ಏಕಸರ, ಟಿಕ್ಕಿ, ಕಿವಿಯಲ್ಲಿ ಬೆಂಡೋಲಿ, ಅಲಿಕತ್ತು ಮೊದಲಾದ ಹಳ್ಳಿಯ ಆಭರಣಗಳನ್ನು ತೋಳಿಗೆ ತೋಳ ಬಂದಿ, ಮೂಗಿನಲ್ಲಿ ನತ್ತು, ಸೊಂಟಕ್ಕೆ ನಡಪಟ್ಟಿ ಇನ್ನೂ ಪಾತ್ರಕ್ಕೆ ತಕ್ಕಂತೆ ಬೇರೆ ಬೇರೆ ಆಭರಣಗಳ್ನು ಧರಿಸುತ್ತಾರೆ. ನಾಟಕದಲ್ಲಿ ಸ್ತ್ರೀಯರಂತೆ ಪುರುಷರು ಸಹ ವೇಷ–ಭೂಷಣ ಹೊಂದಿರುತ್ತಿದ್ದರು. ಪಾತ್ರಕ್ಕೆ ತಕ್ಕಂತೆ ಉದಾ– ತಲೆಗೆ ತಲೆಟೋಪಿಗಳಿರುತ್ತವೆ. ಆ ತಲೆಟೋಪು ಅವರವರ ಅಂತಸ್ತನ್ನು ತಿಳಿಸುತ್ತವೆ. ಪುರಾಣಗಳಲ್ಲಿ ಹೇಳಿದಂತೆ ಅವರ ಕೈಯಲ್ಲಿ ಆಯುಧಗಳಿರುತ್ತವೆ. ಅಂಗಿಗಳು ವಿಶಿಷ್ಟ ರೀತಿಯಲ್ಲಿ ಹೊಲಿಸಿರುತ್ತಿದ್ದರು. ಧೊತ್ರಗಳು, ಶ್ರೀಮಂತರು ಉಡುವ ಅಗಲು ದಡಿಯುಳ್ಳವು ಕೆಲವೊಮ್ಮೆ ರೇಷ್ಮೆಯ ದಡಿಯುಳ್ಳ ಸೀರೆಗಳು ಇರುತ್ತವೆ. ಇಂತಹ ವೇಷ ಭೂಷಣಗಳಲ್ಲಿ ಶ್ರೀ ಸಿದ್ದಗಿರಿ ಸ್ವಾಮಿಗಳು ಧರಿಸುತ್ತಿದ್ದರೆಂದು ತಿಳಿದುಬರುತ್ತದೆ.

ಇಲ್ಲಿ ಸಾಮಾನ್ಯವಾಗಿ ಪೌರಾಣಿಕ ಆಟಗಳಲ್ಲಿ ಒಬ್ಬ ಸೂತ್ರದಾರನು ಇರುತ್ತಾನೆ. ಈತನಿಗೆ ಭಾಗವತ, ದೊರೆ, ಸಾರಥಿ ಎಂದು ಕರೆಯುತ್ತಿದ್ದರು. ಇವನದು ನಿತ್ಯದ ಉಡುಪು ವೇಷ–ಭೂಷಣಗಳ ಗೊಡವೆಯೇ ಇವನಿಗಿಲ್ಲ. ನಗಿಸುವ ಸಲುವಾಗಿ ಕಲವೊಮ್ಮೆ ಆಡ ಸೋಗುಗಳನ್ನು ತರುವುದುಂಟು ಇವು ಸರ್ಕಸ್ಸಿನಲಿರುವ ಜೋಕರಿನಂತೆ, ಇವರು ವಿಚಿತ್ರ ವೇಷದಲ್ಲಿ ಇರುತ್ತಾರೆ.

ನಾಟಕದಲ್ಲಿ ಮುಖ್ಯ ಪಾತ್ರದಾರಿಗಳಿಗೆ ಬಣ್ಣ ಹಚ್ಚುತ್ತಾರೆ. ಸ್ತ್ರೀಯರ ಬಣ್ಣ ಸೌಮ್ಯವಾಗಿರುತ್ತಿದ್ದವು ಪುರುಷರ ಬಣ್ಣ ನೋಡಿ ಪಾತ್ರಕ್ಕೆ ತಕ್ಕಂತೆ ಬೇರೆ-ಬೇರೆ ಯಾಗಿರುತ್ತದೆ. ನಾಟಕದಲ್ಲಿ ಕಥಾನಾಯಕನ ಜೊತೆಯಲ್ಲಿ ಖಳನಾಯಕ, ರಾಕ್ಷಸರ ಪಾತ್ರಗಳು ಗಂಭೀರವಾಗಿದ್ದು ಈ ಮುಖದ ಬಣ್ಣದಿಂದಲೆ ಈತ ಯಾವ ಪಾತ್ರ ಮಾಡುತ್ತಾನೆ ಎಂಬುದು ಕಂಡು ಹಿಡಿಯಲು ಸಾಧ್ಯವಾಗುತ್ತಿತ್ತು. ಇನ್ನು ಸಾಮಾಜಿಕ ನಾಟಕಗಳಲ್ಲಿ ನಿತ್ಯ ಉಡುಪುಗಳೇ ಸಾಕಾಗುತ್ತವೆ. ಇವರ ನಾಟಕಗಳಲ್ಲಿ ಮುಖವಾಡ ಕಂಡು ಬರುವ ಸಾಧ್ಯತೆ ಕಡಿಮೆ.

ಹೀಗೆ ನಾಟಕದಲ್ಲಿ ಅಭಿನಯ ಮಾಡುವ ಪಾತ್ರದಾರಿಗಳಿಗೆ ವೇಷ ಭೂಷಣವೆಂಬುದು ಪ್ರಮುಖ ವಿಷಯವಾಗಿತ್ತು.

## ಬಿ) ನಾಟಕ ಮಂದಿರ ನಿರ್ಮಾಣ- ೧೯೬೨ ರಲ್ಲಿ

"ಪ್ರಯೋಗ ಪ್ರಧಾನ ನಾಟಕ ಕಲೆಯ ಮೂಲಭೂತ ಅವಶ್ಯಕತೆಗಳಲ್ಲೊಂದಾದ ನಾಟಕ ಮಂದಿರವು ನಾಟಕದ ಕಲಾತ್ಮಕ ಯಶಸ್ಸಿನಲ್ಲಿ ಬಹುಮುಖ್ಯ ಪಾತ್ರ ವಹಿಸುವುದು, ಭರತ ಮುನಿ ಪ್ರಸ್ಥಾಪಿಸಿದಂತೆ ರಸ, ಭಾವ, ಅಭಿನಯ, ಧರ್ಮ, ವೃತ್ತಿ, ಪ್ರವೃತ್ತಿ, ಸಿದ್ಧಿ, ಸ್ವರ, ಅಟೋದ್ಯಗಾನ ಮತ್ತು ರಂಗ ಇವು ನಾಟಕದ ಅಂಗಗಳು, ಇವುಗಳಲ್ಲಿ ರಸ ಭಾವಾಭಿನಯಗಳು ನಾಟಕದ ವಸ್ತುವಿಗೆ ಸಂಬಂಧಿಸಿದ್ದರೆ ಸ್ವರ, ಅಟೋದ್ಯ, ಗಾನಗಳು, ಸಂಭಾಷಣೆ ಸಂಗೀತಕ್ಕೆ ಸಂಬಂಧಿಸಿವೆ. ಧರ್ಮ, ವೃತ್ತಿ ಪ್ರವೃತ್ತಿ, ಮತ್ತು ಸಿದ್ಧಿ ಪ್ರಯೋಗಕ್ಕೆ ಉಪಯುಕ್ತವಾದವುಗಳು, ಈ ಎಲ್ಲ ಅಂಶಗಳೂ ಮೇಳಗೂಡಿ ಪ್ರಯೋಗಗೊಳ್ಳುವ, (ಅಭಿನಯ ಭಾಗ) ಸ್ಥಳವೇ ರಂಗ ಇದು ರಂಗಮಂದಿರದ ಒಂದು ಅಂಗ, ಇದರ ಹಿಂದುಗಡೆ ನೇಪದ್ಯ ಮುಂದೆ ಪ್ರೇಕ್ಷಾಗೃಹವಿರುವುದು, ಪ್ರಧಾನವಾಗಿ ರಂಗಮಂದಿರ ಈ ಮೂರನ್ನು ಒಳಗೊಂಡ ಒಂದು ವ್ಯವಸ್ಥೆ ಭರತ ಮುನಿ ಇದಕ್ಕೆ 'ನಾಟ್ಯ ಮಂಟಪ' ಎಂದು ಹೆಸರಿಸಿದರೆ, ಪ್ರಾಚೀನ ಕರ್ನಾಟಕದಲ್ಲಿ 'ನಾಟಕ ಶಾಲೆ' ಎನ್ನಲಾಗಿದೆ. ಈ ನಾಟಕ ಶಾಲೆಯ ಸ್ವರೂಪದ ಬಗ್ಗೆ ಖಚಿತವಾದ ವಿವರಗಳು ಇನ್ನೂ ಲಭಿಸಬೇಕಾಗಿದೆ.[೮] ಎಲ್ಲರ ಪ್ರವೇಶಕ್ಕೂ ಮುಕ್ತ ಅವಕಾಶವನ್ನೀಯುವ ಜನಪದ ನಾಟಕ ಮಂದಿರವನ್ನು ಮಧುರಖಂಡಿ ಗ್ರಾಮದಲ್ಲಿ ಶ್ರೀ ಸಿದ್ದಗಿರಿ ಮಹಾ ಸ್ವಾಮಿಗಳು ೧೯೬೨ರಲ್ಲಿ ನಿರ್ಮಾಣ ಮಾಡಿದರು. ಈ ನಾಟಕ ಮಂದಿರ ಸ್ಥಾಪನೆ ಮಾಡಿರುವುದರಿಂದಲೇ ಅವರಿಗೆ ನಾಟಕದ ಮೇಲೆ ಇದ್ದ ಅಭಿಮಾನವು ತಿಳಿದು ಬರುತ್ತದೆ. ಇಂದಿಗೂ ಸಹ ಈ ನಾಟ್ಯ ಶಾಲೆಯಲ್ಲಿ ಅವಕಾಶ ಸಿಕ್ಕಾಗಲೆಲ್ಲ ನಟರು ರಂಗ ತಾಲೀಮನ್ನು ಮಾಡುತ್ತಾರೆ.

---

ಮಧುರಖಂಡಿಯಲ್ಲಿ ನಾಟ್ಯ ಶಾಲೆ ನೋಡಿ ಮಾಹಿತಿ ಸಂಗ್ರಹಿಸಲಾಗಿದೆ.




ನಾಟ್ಯ ಶಾಲೆ

## ಸಿ) ಮಲ್ಲಮ್ಮನ ಮೂರ್ತಿ ಪ್ರತಿಷ್ಠಾಪನೆ

ಪ್ರತಿಯೊಂದು ದೇಶ, ನಾಡು, ಪಟ್ಟಣ, ಗ್ರಾಮಗಳಿಗೆ ತನ್ನದೇ ಆದ ಒಂದು ಇತಿಹಾಸ ವಿರುತ್ತದೆ. ಮಧುರಖಂಡಿ ಗ್ರಾಮದಲ್ಲಿ ಅತ್ಯಂತ ಸುಂದರವಾದ ಮಲ್ಲಮ್ಮನ ಮೂರ್ತಿ ಪ್ರತಿಷ್ಠಾಪನೆ ಮಾಡಲಾಗಿದೆ. ಅದರ ಹಿಂದೆ ಒಂದು ಇತಿಹಾಸ ವಿದೆ. ಶ್ರೀ ಸಿದ್ಧಗಿರಿ ಸ್ವಾಮಿಗಳು ಈ ಗ್ರಾಮದಲ್ಲಿ ಶ್ರೀ ಮಲ್ಲಿಕಾರ್ಜುನ ಪ್ರಾಸಾಧಿಕ ನಾಟ್ಯ ಸಂಘ ಮಧುರಖಂಡಿ, ಎಂಬ ನಾಟಕ ಕಂಪನಿ ಕಟ್ಟಿ, ಇವರೇ ಸಂಪೂರ್ಣ ಹೇಮರಡ್ಡಿ ಮಲ್ಲಮ್ಮ ನಾಟಕ ಪ್ರದರ್ಶಿಸಿ, ನಾಡಿನಾದ್ಯಂತ ಹೆಸರು ಪಡೆದರು. ಈ ನಾಟಕದಲ್ಲಿ ಪ್ರಮುಖ ಸ್ತ್ರೀ ಪಾತ್ರವಾದ ಮಲ್ಲಮ್ಮನ ಪಾತ್ರದಲ್ಲಿ ಶ್ರೀ ಸಿದ್ದಗಿರಿ ಸ್ವಾಮಿಗಳು ಪಾತ್ರಾಭಿನಯ ಮಾಡುತ್ತಿದ್ದರು. ಇವರು ಮಲ್ಲಮ್ಮನ ಪಾತ್ರದಲ್ಲಿ ತನ್ಮಯರಾಗಿ ಮಲ್ಲಮ್ಮನೇ ತಾವಾಗಿ ಭಕ್ತಿ ಶ್ರದ್ದೆಯಿಂದ ಅಭಿನಯಿಸುತ್ತಿದ್ದರು. ಇವರು ಹಲವಾರು ವರ್ಷಗಳ ವರೆಗೆ ಪ್ರದರ್ಶಿಸಿದ ಕಲೆಯ ನೆನಪಿಗಾಗಿ ಮಧುರಖಂಡಿಯ ಮಲ್ಲಿಕಾರ್ಜುನ ದೇವಸ್ಥಾನದಲ್ಲಿ ಎಡಕ್ಕೆ ೨೧-೦೫-೧೯೬೮ರಲ್ಲಿ ಮಲ್ಲಿಕಾರ್ಜುನನಿಗೆ ಕೈ ಮುಗಿದು ಕುಳಿತಿರುವ ಮಲ್ಲಮ್ಮನ ಮೂರ್ತಿ ಪ್ರತಿಷ್ಠಾಪನೆಯನ್ನು ಶ್ರೀ ಸಿದ್ದಗಿರಿ ಸ್ವಾಮಿಗಳು ಮಾಡಿದ್ದಾರೆ. ಈ ಎಲ್ಲ ಸಂಗತಿ ನೋಡಿದರೆ ಇವರಿಗೆ ನಾಟಕದ ಮೇಲೆ ಎಷ್ಟೊಂದು ಆಸಕ್ತಿ ಇತ್ತು ಎಂಬುದರ ಬಗ್ಗೆ ಮನವರಿಕೆ ಯಾಗುತ್ತದೆ.

---

ಮಧುರಖಂಡಿ ಗ್ರಾಮದ ಜನರ ಸಂದರ್ಶನದಿಂದ ಮತ್ತು ಕಲಾಭಿಮಾನಿಗಳ ಸಹಾಯದಿಂದ ಈ ಮಾಹಿತಿ ಪಡೆಯಲಾಯಿತು. ಮತ್ತು ಮಲ್ಲಮ್ಮನ ಮೂರ್ತಿ ನೋಡಿ ತಿಳಿಯಲಾಯಿತು.




ಶ್ರೀ ಸಿದ್ಧಗಿರಿ ಸ್ವಾಮಿಗಳಿಂದ ಸ್ಥಾಪಿಸಲ್ಪಟ್ಟ

ಮಲ್ಲಮ್ಮನ ಮೂರ್ತಿ

## ೩.೫ ಪುರಾಣಗಳು

೧೯೬೦ ರಿಂದ ಸಿದ್ದಗಿರಿ ಸ್ವಾಮಿಗಳು ಪುರಾಣ ಹೇಳಲು ಪ್ರಾರಂಭಿಸಿದ್ದರು. ಮಲ್ಲಮ್ಮನ ಬೈಲಾಟದಲ್ಲಿ ಭಾಗವಹಿಸುವುದಕ್ಕಂತ ಮುಂಚಿತವಾಗಿಯೇ ಪುರಾಣಗವನ್ನು ಪ್ರಾರಂಭಿಸಿದ್ದರು. ಮೊದಲು ಮಧುರಖಂಡಿಯಲ್ಲಿಯೇ ದೇವಿ ಪುರಾಣವನ್ನು ಪ್ರಾರಂಭಿಸಿದರು. ಸಂಗೀತದೊಂದಿಗೆ ಇವರ ಪುರಾಣ ನಡೆಯುತ್ತಿತ್ತು. ತಬಲಾ, ಹಾರ್ಮೋನಿಯಂ, ತಂಬೂರಿ, ಈ ವಾದ್ಯಗಳೊಂದಿಗೆ ನಡೆದ ಇವರ ಪುರಾಣ ಕೇಳುವವರಿಗೆ ಬಹಳೇ ಅದ್ದೂರಿ ಎನಿಸುತ್ತಿತ್ತು.

ಎಂತಹ ಕಠಿಣ ಪದಗಳಿದ್ದರೂ ಪದಚ್ಚೇದ ಮಾಡಿ ಜನರಿಗೆ ತಿಳಿಯುವ ಹಾಗೆ ಹೇಳುವ ಶೈಲಿ ಇವರಿಗಿತ್ತು. ನಡು ನಡುವೆ ಬೇಸರವಾದಾಗ ಹಾಗೇ ಹಾಸ್ಯವನ್ನು ಮುಖ್ಯಪುರಾಣ ವಸ್ತುವಿಗೆ ಭಂಗಭಾರದಂತೆ ದೃಷ್ಟಾಂತ ಕಥೆಗಳನ್ನು ಹೆಣೆದು ಪುರಾಣದ ಸಿದ್ಧತೆ ಮಾಡಿಕೊಳ್ಳುತ್ತಿದ್ದರು. ಅದಕ್ಕಂತಲೇ ಅನೇಕ ಜನರು ಪುರಾಣ ಹೇಳಬೇಕಂದ್ರ ಸಿದ್ಧಗಿರಿ ಸ್ವಾಮಿಗಳು ಮಾತ್ರ ಎಂದು ಬಿಚ್ಚು ಮನಸ್ಸಿನಿಂದ ಹೇಳಿದ್ದಾರೆ.

ಸಂಗೀತ ಸಾಹಿತ್ಯದ ಅಭ್ಯಾಸ ಇವರಲ್ಲಿ ತಲಸ್ಪರ್ಶಿಯಾಗಿ ಇದ್ದುದರಿಂದ ಪುರಾಣವು ರಸವತ್ತಾಗಿ ನಡೆಯುತ್ತಿತ್ತು. ಇವರು ಪುರಾಣ ನಡೆಸಿಕೊಟ್ಟ ಹಳ್ಳಿಗಳ ಹೆಸರುಗಳನ್ನು ಹೇಳಿದರೆ ದೊಡ್ಡ ಪಟ್ಟಿಯನ್ನೇ ಮಾಡಬೇಕಾಗುತ್ತದೆ. ಇವರಿಗೆ ಬಂದ ಬಿನ್ನ ವತ್ತಳೆಗಳು, ಪ್ರಶಸ್ತಿ ಪತ್ರಗಳು ಪುರಾಣ ಸಾಹಿತ್ಯಕ್ಕೆ ಲೆಕ್ಕವಿಲ್ಲದಷ್ಟಿವೆ.

ಇವರು ಪುರಾಣ ಪ್ರಾರಂಭಮಾಡಿ ಜನ-ಪ್ರೀಯತೆಗಳಿಸಿದ ನಂತರ ಸಿದ್ಧಗಿರಿ ಸ್ವಾಮಿ ಮಠಪತಿ ಎಂದು ಪತ್ರಗಳು ಬಾರದೆ ಸಿದ್ಧಗಿರಿ ಸ್ವಾಮಿಗಳು ಪುರಾಣಿಕ ಎಂದು ಪತ್ರಗಳು ಬರಲು ಪ್ರಾರಂಭಿಸಿದವು.

## ಪುರಾಣಗಳು

ಶ್ರೀ ಪಂಡಿತ ಕಲ್ಲಿನಾಥ ಶಾಸ್ತ್ರಿಗಳಿಂದ ರಚಿತವಾದ ಶ್ರೀ ಕಲಬುರ್ಗಿ ಶರಣ ಬಸವೇಶ್ವರರ ಪುರಾಣವನ್ನು ಶ್ರೀ ಸಿದ್ದಗಿರಿ ಸ್ವಾಮಿಗಳು ಹೇಳಿರುವುದು ಬಹಳ ಮೆಚ್ಚುಗೆಯ ಸಂಗತಿಯಾಗಿದೆ. ಅವುಗಳ ವಿವರ ಹೀಗೆ ಇದೆ.

| | ಗ್ರಾಮಗಳು | ಇಸ್ವಿಗಳು | ಮಿತಿಗಳು (ತಿಥಿ) | ವರ್ಷ |
|---|---|---|---|---|
| ೧ | ಬಿದರಿ | ೧೯೭೭-೮೮-೧೯೭೮ | ಶ್ರಾವಣ ಮಾಸದಲ್ಲಿ | ೨ |
| ೨ | ಮಾದನ ಹಿಪ್ಪರಗಾ | ೨೪-೮-೧೯೭೯ | ಶ್ರಾವಣ ಮಾಸದಲ್ಲಿ | ೧ |
| ೩ | ಮರೆಗುದ್ದಿ | ೧೯೭೯ | ನವೆಂಬರದಿಂದ-ಡಿಸಂಬರ | ೧ |
| ೪ | ಹಂದಿಗುಂದ | ೨೮-೧೨-೧೯೭೯ ರಿಂದ ೨೯-೦೧-೧೯೮೦ರ ವರೆಗೆ ಇದೇ ರೀತಿ ೧೯೮೧-೧೯೮೨ | ಮಾಘಮಾಸ | ೩ |
| ೫ | ಚಿಮ್ಮಡ | ೧೯೮೧-೧೯೮೨-೧೯೮೩ | ಏಪ್ರೀಲ್ ದಿಂದ ಮೇ ವರೆಗೆ | ೩ |
| ೬ | ಹಿರೇ ಅಲಗುಂಡಿ | ೧೯೮೨-೧೯೮೪ -೧೯೮೫ | ನವೆಂಬರದಿಂದ ಡಿಸೆಂಬರ ವರೆಗೆ | ೩ |
| ೭ | ಕೆಸರಗೊಪ್ಪ | ೧೯೯೨-೧೯೯೨, ೯೪ | ಮಾರ್ಚ ದಿಂದ ಏಪ್ರೀಲ್ | ೩ |
| ೮ | ಕವಟಗಿ | ೧೯೯೩ | ಶ್ರಾವಣ ಮಾಸದಲ್ಲಿ | ೧ |
| ೯ | ಕನ್ನೊಳ್ಳಿ | ೧೯೯೪ | ಶ್ರಾವಣ ಮಾಸದಲ್ಲಿ | ೧ |
| ೧೦ | ಕುಂಚನೂರ | ೧೯೯೫ | ಶ್ರಾವಣ ಮಾಸದಲ್ಲಿ | ೧ |
| ೧೧ | ಮಧುರಖಂಡಿ | ೧೯೮೩-೧೯೮೯, ೧೯೯೦ | ಮಹಾನವಮಿಯಿಂದ ದಸರಾದ ವರೆಗೆ | ೩ |

ಈ ರೀತಿಯಾಗಿ ಪುರಾಣ-ಪ್ರವಚನ ಪಟು, ಹಾಗೂ ಉಪನ್ಯಾಸದಲುತ್ತುಂಗ, ಸಂಗೀತ ಶಿವ ಭಜನಾ ಧುರಿಣರಾದ ಶ್ರೀ ವೇದ ಮೂರ್ತಿ ಶ್ರೀ ಸಿದ್ಧಗಿರಿ ಸ್ವಾಮಿಗಳು ಒಟ್ಟಾರೆಯಾಗಿ ೨೨ ವರ್ಷ ಪುರಾಣ ಹೇಳಿದ್ದಾರೆ.

## ಶ್ರೀ ಸಿದ್ದಗಿರಿ ಸ್ವಾಮಿಗಳಿಗೆ ಪುರಾಣ ಹೇಳಿದ್ದಕ್ಕಾಗಿ ದೊರಕಿದ ಕೆಲವು ಸನ್ಮಾನ ಪತ್ರಗಳು

೧] ಶ್ರೀ ಮ. ನಿ. ಪ್ರ. ಸ್ವ ವಿರಕ್ತ ಸ್ವಾಮಿಗಳ ಸನ್ನಿಧಾನದಲ್ಲಿ ಬಸವೇಶ್ವರ ಯುವಕ ಮಂಡಳಿ ಚಿಮ್ಮಡ ಇವರು ನೀಡಿದ ಪತ್ರ

ಶ್ರೀ ಪ್ರಭುಲಿಂಗ ಲೀಲಾ ಪುರಾಣ ಸುಕ್ಷೇತ್ರ ಚಿಮ್ಮಡ ಗ್ರಾಮದಲ್ಲಿ ೧೯೮೧, ೧೯೮೨, ೧೯೮೩ ಎಪ್ರೀಲ್ ದಿಂದ ಮೇ, ದ ವರೆಗೆ ಪುರಾಣ ಹೇಳುವಲ್ಲಿ ಕೆಡುವ ತನುವಿನ ಸಫಲವಾವುದು ಪರ ಹಿತಾರ್ಥ ಉಕ್ತಿಗನುಸಾರವಾಗಿ ಈ ಮೃತ್ಯುಲೋಕದಲ್ಲಿ ಹಲವು ಜನರು ತಮ್ಮ ಜನ್ಮದಾರಭ್ಯದಿಂದ ಕೊನೆಯ ಉಸಿರಿನ ವರೆಗೆ ಸಕಲ ಜೀವಿಗಳಲ್ಲಿ ಕರುಣೆಯುಳ್ಳವರಾಗಿ ತನುಮನ ಧನದಿಂದ ತ್ರಿಕರಣ ಪೂರ್ವಕವಾಗಿ ಜನರ ಭವದ ಬೇರಾವ ಅಜ್ಞಾನವನ್ನು ತೊಡೆದು ಹಾಕಿದ ಮಹಾತ್ಮರ ಮಾಲಿಕೆಯಲ್ಲಿ ಶ್ರೀ ಸಿದ್ಧಗಿರಿ ಸ್ವಾಮಿಗಳು ಒಬ್ಬರಾಗಿದ್ದಾರೆ.

ಕಲ್ಲು ಸಕ್ಕರೆಯ ಸವಿಯನ್ನು ರಸನೆಯಿಂದ ಸವಿದು ಸಂತೋಷಿಸುವಂತೆ ಇವರ ಪುರಾಣವನ್ನು ಕೇಳಿ ನಿತ್ಯ ಸುಖ ಸ್ವರೂಪಿಗಳಾಗಿ ಜನ್ಮ ಸಾರ್ಥಕ ಮಾಡಿಕೊಳ್ಳುವುದು ಪ್ರತಿಯೊಬ್ಬರ ಕರ್ತವ್ಯವಾಗಿದೆ.

ಶ್ರೀ ಮಡಿವಾಳೇಶ್ವರ ಪುರಾಣ ಸುಕ್ಷೇತ್ರ ಹಿರೇ ಆಲಗುಂಡಿ ಬಿ. ಕೆ. ಗ್ರಾಮದಲ್ಲಿ ೧೯೮೩-೮೪-೮೫ ನವಂಬರದಿಂದ ಡಿಸೆಂಬರದ ವರೆಗೆ ಸುಮಾರು ಮೂರು ವರ್ಷಗಳ ವರೆಗೆ ಪುರಾಣ ಹೇಳಿದರು. ಮಾನವ ಜನ್ಮದ ಮಹಾಸಿದ್ಧಿ ಯಾವುದು ಅಂಗ ಸಿದ್ಧಿ-ಲಿಂಗಸಿದ್ಧಿ ಅಂಗ ಕ್ರಿಯೆಗಳೆಲ್ಲ ಲಿಂಗಕ್ರಿಯೆಗಳಾಗಿ, ಮಹಾ ಬೆಳಗಿನೋಳಗಣ ಬೆಳಗಿನಲ್ಲಿ ಸ್ವ ಲೀಲಾನಂದ ವಿಲಾಸದಿಂದ ಇರುವುದೇ ಮಾನವ ಜನ್ಮದ ಸಿದ್ಧಿ, ಆ ಪರಮ ಪದದಲ್ಲಿ ನಿಜದಗುರುವಿನ ಪರಂ ಜ್ಯೋತಿ ಬೆಳಗುತ್ತಾನೆ, ಆತನು ನಿತ್ಯ ಪರಿಪೂರ್ಣವಾದ ಸತ್ಯ ಜ್ಞಾನಾನಂದದ ಮಹಾಸಾಗರದಲ್ಲಿ ಬೆರೆಸಿ ಬೆರಿಲ್ಲದಂತಿರುತ್ತಾನೆ. ಲಿಂಗ-ಲೀಲಾ ವಿಲಾಸದಲ್ಲಿಯೇ ಮರ್ತ್ಯದ ಮನಿಹವ ಪೂರೈಸುವುದೇ ಮಾನವ ಜನ್ಮದ ಮಹಾಸಿದ್ಧಿ, ಇಂಥ ಹಾಲೊಳಗನ ಇಂಪು, ಹೂವಿನೊಳು ಪರಿಮಳ, ಬೆರೆದಿರುವಂತೆ ಪರಶಿವನಲ್ಲಿ ಬೆರೆದು ಬೇರಿಲ್ಲದಂತೆ ಇರುವುದು ಮಹಾತ್ಮರ ಉದ್ದೇಶ.

೨] ಶ್ರಿ ಮ. ನಿ. ಪ್ರ. ಸ್ವ ಶ್ರೀ ನಿರುಪಾದಯ್ಯ ಮಹಾಸ್ವಾಮಿಗಳ ಸನ್ನಿಧಾನದಲ್ಲಿ ಮತ್ತು ವಿದ್ವಣ್ಮನಿಗಳ ಸನ್ನಿಧಾನದಲ್ಲಿ ಸದ್ಭಕ್ತ ಮಂಡಳಿ ಜಕನೂರ ಗ್ರಾಮದ ಜನ ನೀಡಿದ ಸನ್ಮಾನ ಪತ್ರ.

ಶ್ರೀ ಪ್ರಭುಲಿಂಗ ಲೀಲಾ ಪುರಾಣ ಸುಕ್ಷೇತ್ರ ಜಕನೂರ ಗ್ರಾಮ ೧೨-೦೬-೧೯೮೦ನೇ ದಿವಸ ಪ್ರಾರಂಭಿಸಿ ೨೭-೦೬-೧೯೮೦ ನೇ ದಿವಸ ಮಂಗಲ ಮಾಡಿದ್ದಾರೆ.

ಭವಹರಣವೇ ಜನ್ಮದ ಲಾಭ ಈ ಭವಹರಣವನ್ನು ಮಾಡುವಂತೆ ಈ ಮೃತ್ಯು ಲೋಕದಲ್ಲಿ ಅನೇಕ ಮಹಾತ್ಮರು ತಮ್ಮ ಕೊನೆಯ ಉಸುರಿನ ವರೆಗೆ ಸಕಲ ಜೀವಿಗಳಲ್ಲಿ ಕರುಣೆಯುಳ್ಳವರಾಗಿ ತಮ್ಮ ಕಂಠ ಶೋಷಣೆಯಾಗುವುದನ್ನು ಕೂಡಾ ಲೆಕ್ಕಿಸದೆ ಸಕಲರನ್ನು ಹುಟ್ಟು ಸಾವು ಇವುಗಳಿಂದ ತಪ್ಪಿಸಲು ಹೊರಾಡುತ್ತಾರೆ. ಸಿದ್ಧಗಿರಿ ಸ್ವಾಮಿಗಳು ಪ್ರಭುಲಿಂಗ ಲೀಲೆ ಎಂಬ ಪುರಾಣದ ಮುಖಾಂತರ ಎಲ್ಲ ಜನರ ತಾಮಸ ಗುಣವನ್ನು ಹೊಡೆದು ಹಾಕುವಂತೆ ಮಾಡಿ ಸಾತ್ವಿಕ ಗುಣದ ಬೀಜ ಬಿತ್ತುವಂತೆಯೇ ಮಾಡಿದರು. ಮತ್ತು ಎಲ್ಲರನ್ನು ಪರತತ್ವದ ಕಡೆಗೆ ಶೀಲ ಸೌಜನ್ಯತೆಯ ಕಡೆಗೆ ಮನಸ್ಸು ತಿರುಗಿಸುವಂತೆ ಪುರಾಣ ಹೇಳುತ್ತಿದ್ದರು.

**ಶ್ರೀ ಕಲಬುರ್ಗಿ ಶರಣ ಬಸವೇಶ್ವರರ ಪುರಾಣ**

ಶ್ರೀ ಶಿವಾನಂದ ದೇವರು ಸದ್ಭಕ್ತ ಮಂಡಳಿ ಹಂದಿಗುಂದ ಇವರಿಂದ ದೊರೆತ ಸನ್ಮಾನ ಪತ್ರ. ಸುಕ್ಷೇತ್ರ ಹಂದಿಗುಂದ ಗ್ರಾಮದಲ್ಲಿ ೧೮-೧೨-೧೮೭೯ ರಿಂದ ೨೯-೧೧೯೮೦ ರ ವರೆಗೆ ಮಾಘಮಾಸ ೩ ವರ್ಷ ಇದೇ ತೀತಿ ೧೯೮೧ ರಿಂದ ೧೯೮೨ ಒಂದು (೧) ವರ್ಷಗಳವರೆಗೆ ಪುರಾಣ ಹೇಳಿದರು.

ಆದ್ಯಾತ್ಮದ ಸುಮಧುರ ಸೌರಭವಾಗಿ ನಾಡಿನ ಎಲ್ಲೆಡೆ ಸುವಾಸನೆ ಬೀರಿದರು ಪುರಾಣ ಪ್ರವಚನಕಾರರಾದ ತಾವು ಕ್ರಿ.ಶ. ೧೯೬೭ ರಿಂದ ವರ್ತಮಾನ ಕಾಲದ ವರೆಗೆ ತಮ್ಮಿಂದ ಶ್ರೀ ಬಿಳ್ಳೂರ ಶಿವಯೋಗಿ ಗುರುಬಸವ ಸ್ವಾಮಿಗಳು ಅಥಣಿ ಶಿವಯೋಗಿಗಳವರ, ಸೊನ್ನಲಾಪುರದ ಸಿದ್ಧರಾಮೇಶ್ವರರ, ಹಾನಗಲ್ ಸಾನಂದೇಶ್ವರರ, ಸಾವಳಗಿಯ ಶಿವಲಿಂಗೇಶ್ವರರ, ಯಡಿಯೂರ ಸಿದ್ಧಲಿಂಗೇಶ್ವರರ, ಬಿದರಿ ಕುಮಾರ

ಸ್ವಾಮಿಗಳವರ, ಹೇಮರಡ್ಡಿ ಮಲ್ಲಮ್ಮ, ಚೋರ ಬಸವನ, ಶರಣರ ಮೌನೇಶ್ವರರ, ಅಕ್ಕಮಹಾದೇವಿಯ, ಪ್ರಭುಲಿಂಗ ಲೀಲೆ, ಶ್ರೀದೇವಿ ಮಹಾತ್ಮೆ ಹಾಗೂ ಅನೇಕ ಶಿವ ಶರಣರ ಪುರಾಣವನ್ನು ನವರಸ ಭರಿತವಾಗಿ ಹಾವಭಾವ ಯುಕ್ತವಾಗಿ ಜನ ಸಾಮಾನ್ಯರಿಗೂ ಅರ್ಥವಾಗುವ ಶೈಲಿಯಲ್ಲಿ ಹೇಳುವ ಕಲೆ ಹೊಂದಿದ್ದಾರೆ. ಅಲ್ಲದೆ ಅನೇಕ ಶಾಸ್ತ್ರಿಯ ಸಂಗೀತ ಸುಧೆಯನ್ನು ಜನತೆಯ ನೈತಿಕತೆ, ಧಾರ್ಮಿಕತೆ, ಸಾಮಾಜಿಕತೆ, ಬೌದ್ಧಿಕತೆಯ ದೃಷ್ಟಿಯಿಂದ ಜನ-ಜೀವನವನ್ನು ಪಾವನ ಗೊಳಿಸಿದ ಕೀರ್ತಿ ಸಿದ್ಧಗಿರಿ ಸ್ವಾಮಿಯವರಿಗೆ ಸಲ್ಲುತ್ತದೆ.

**ಶ್ರೀ ಕಲಬುರ್ಗಿ ಶರಣ ಬಸವೇಶ್ವರ ಪುರಾಣ**

ಶ್ರೀ ಶೋ. ಭ್ರ. ಶಿವಯ್ಯ ಅಪ್ಪನವರ ದಿವ್ಯ ಸನ್ನಿಧಿಯಲ್ಲಿ ಹಾಗೂ ಸದ್ಭಕ್ತ ಮಂಡಳಿ ಕವಟಗಿ ಇವರಿಂದ ದೊರೆತ ಸನ್ಮಾನ ಪತ್ರ. ಸುಕ್ಷೇತ್ರ ಕವಟಗಿ ಗ್ರಾಮ ೧೯-೦೭-೧೯೯೨ ರಿಂದ ೨೮-೦೮-೧೯೯೩ ರ ವರೆಗೆ ಜನರ ಮನದಲ್ಲಿರುವ ಕೊಳೆಯನ್ನು ಶ್ರಾವಣ ಮಾಸದಲ್ಲಿ ಸುಮಾರು ಒಂದು ವರ್ಷದ ಅವದಿಯಲ್ಲಿ ಆದ್ಯಾತ್ಮದ ಪವಿತ್ರ ಸ್ನಾನ ಮಾಡಿಸಿ ಶಿವನಾಮದೊಂದಿಗೆ ಅವರ ಅಂತರಂಗದ ಕೊಳೆಯನ್ನು ಹೋಗಲಾಡಿಸಿದರು.



ಶ್ರೀ ವೀರಶೈವ ಲಿಂಗಾಯತ ಸಮಾಜದ ಮಠದಲ್ಲಿ ಸದ್ಭಕ್ತ ಮಂಡಳಿ ಕುಂಚನೂರ ಗ್ರಾಮದವರಿಂದ ದೊರೆತ ಸನ್ಮಾನ ಪತ್ರ. ಮುಂದೆ ಸುಕ್ಷೇತ್ರ ಕುಂಚನೂರ ಗ್ರಾಮದಲ್ಲಿಯೂ ಸಹ ತಮ್ಮ ಅಸ್ಕಲಿತ ವಾಣಿಯಿಂದ ಎಂತವರನ್ನು ಕೂಡಾ ಧರ್ಮ ಮಾರ್ಗದತ್ತ ಎಳೆದುಕೊಂಡು ಹೋಗುವಂತೆ ಶ್ರಾವಣ ಮಾಸದಿಂದ ಗಣಾಚೌತಿಯ ವರೆಗೆ ಅಂದರೆ ೨೭-೦೭-೧೯೯೫ ರಿಂದ ೨೮-೦೮-೧೯೯೫ರ ವರೆಗೆ ತಮ್ಮ ಜ್ಞಾನ ಸುಧೆಯನ್ನು ಜನರಿಗೆ ಮನ ಮುಟ್ಟುವಂತೆ ತಿಳಿ ಹೇಳಿದರು.

**ಹಾಗೇಯೇ ಸುಕ್ಷೇತ್ರ ಕೆಸರಗೊಪ್ಪ ಗ್ರಾಮದಲ್ಲಿ**

ಶ್ರೀ ಬಿಸಿಲ ಸಿದ್ದೇಶ್ವರ ದೇವಾಲಯದಲ್ಲಿ ಬಸವ ಜಯಂತಿಯ ನಿಮಿತ್ಯವಾಗಿ ಸದ್ಭಕ್ತ ಮಂಡಳಿ ಕೆಸರಗೊಪ್ಪ ಗ್ರಾಮದವರಿಂದ ದೊರೆತ ಸನ್ಮಾನ ಪತ್ರ.

ಶ್ರೀ ಬಿಸಿಲ ಸಿದ್ದೇಶ್ವರ ಜಾತ್ರೆಯ ನಿಮಿತ್ಯವಾಗಿ ಶ್ರೀ ಕಲಬುರ್ಗಿಯ ಶರಣ ಬಸವೇಶ್ವರರ ಪುರಾಣವನ್ನು ಯುಗಾದಿ ಪಾಡ್ಯದಿಂದ ಬಸವ ಜಯಂತಿಯ ವರೆಗೆ ಎಡಬಿಡದೆ ಸುಮಾರು ಮೂರು ವರ್ಷಗಳ ಕಾಲ ಅಂದರೆ ೧೯೯೨-೧೯೯೩, ೧೯೯೪ರ ವರೆಗೆ ತತ್ವ ಜಿಜ್ಞಾಸೆನ್ನೆ ತಮ್ಮ ಜೀವನದ ಉಸಿರನ್ನಾಗಿಸಿಕೊಂಡಿರುವ ಈ ಮಹಾನುಭಾವರು ಜನಸಾಮಾನ್ಯರಿಗೂ ಕೂಡಾ ಆಧ್ಯಾತ್ಮದ ತಿರುಳನ್ನು ತಿಳಿಸುವ ಸುಮಧುರವಾದ ಸಂಭೋಧನಾ ಶೈಲಿಯನ್ನು ಸಾಧಿಸಿಕೊಂಡಿದ್ದಾರೆ. ಇಂಥ ವಾಣಿಯಿಂದ ಜೀವಕೋಟಿಗಳ ಹೃದಯದ ಕೊಳೆಯನ್ನು ತೊಳೆದು ಅಲ್ಲಿ ಬೋಧನೆಯಿಂದ ಧಾರ್ಮಿಕ, ಸಾಂಸ್ಕೃತಿಕ, ಭಕ್ತಿ, ಜ್ಞಾನ, ವೈರಾಗ್ಯದಿಂದ ತುಂಬಿದ ಜನರ ಮನದಲ್ಲಿ ಸಂಸ್ಕಾರದ ಬೀಜನ್ನು ತುಂಬಿ ಪರಿವರ್ತಿಸಿರುವರೆಂದು ಹೇಳಬಹುದು.

**ಶ್ರೀ ಶಿವಯೋಗಿಗಳ ಪುರಾಣ ಸುಕ್ಷೇತ್ರ ಬಿದರಿ.**

ಗ್ರಾಮದ ಸದ್ಭಕ್ತ ಮಂಡಳಿಯಿಂದ ದೊರೆತ ಸನ್ಮಾನ ಪತ್ರ.

ಸುಮಾರು ೧೯೭೭-೧೯೭೮, ೧೯೭೮ರ ವರೆಗೆ ಅಂದರೆ ಮೂರು ವರ್ಷಗಳ ವರೆಗೆ ಶ್ರಾವಣ ಮಾಸದಲ್ಲಿ ಪುರಾಣ ಪ್ರವಚನ ಹೇಳಿದರು ಇವರು ನಿಜಗುಣ ಶಿವಯೋಗಿಗಳ ಶಾಸ್ತ್ರಗಳಾದ ಕೈವಲ್ಯ ಪದ್ಧತಿ, ಪರಮಾನು ಭವ ಬೋಧೆ, ಅನುಭವ ಸಾರ, ಪರಮಾರ್ಥಗೀತೆ, ವಿವೇಕ ಚಿಂತಾಣಿ, ಪರಮಾರ್ಥ ಪ್ರಕಾಶಿಕೆ, ಅಲ್ಲದೆ ವಿಚಾರಸಾಗರ ಪಂಚರಶಿ, ವೃತ್ತಿಪ್ರಭಾಕರ, ಮುಂತಾದ ಶಾಸ್ತ್ರಗಳನ್ನು ಹುನ್ನೂರ ಜ್ಞಾನ ಮಂದಿರದಲ್ಲಿ ಶ್ರೀ ಶಿವಾನುಭವಿ ಶಿವಪ್ಪಜ್ಜನವರಿಂದ ಅಭ್ಯಾಸ ಹೇಳಿಸಿಕೊಂಡು ಸರಿಯಾಗಿ ಅಭ್ಯಾಸ ಮಾಡಿದ್ದಾರೆ. ಮತ್ತು ಶ್ರೀ ಪರಮಹಂಸ ಶಂಕರಾನಂದ ಶಿವಪುತ್ರಸ್ವಾಮಿ ಹುಬ್ಬಳ್ಳಿ ಇವರ ಮುಖದಿಂದ ಬಗವದ್ಗೀತಾ ಬ್ರಹ್ಮ ಸೂತ್ರಗಳನ್ನು ಶ್ರವಣ ಮಾಡಿದ್ದಾರೆ. ಜ್ಞಾನ ಸ್ಥಿತಿ ಅವರಿಗೆ ಮೇಲೆ ಕಾಣಿಸಿದ ಅವರ ಜೀವನ ಪ್ರವಾಹವು ಸುಗಮವಾಗಿ ಸಾಗಿ ಬಂದದ್ದು ಸ್ವರೂಪ ಜ್ಞಾನ ಕೋಶ ಸಮೃದ್ಧ ನಾಡನ್ನು ಕಟ್ಟಿದ್ದಾರೆ ಇವರು ಬ್ರಹ್ಮ ವಿತ, ಬ್ರಹ್ಮ ವಿದ್ಯ, ಬ್ರಹ್ಮ ವಿಷ್ಣರಾದ್ಯ, ಬ್ರಹ್ಮ ವಿದ್ಧರಿಷ್ಟ ಸ್ಥಿತಿಯನ್ನು ಹೊಂದುತ್ತಾ ಬಂದಿದ್ದಾರೆ.

## ೩.೬ ಭಜನಾ ಕಂಪನಿಗಳು

ಸಿದ್ಧಗಿರಿ ಸ್ವಾಮಿಗಳು ನಾಟಕಕ್ಕೆ ವಿದಾಯ ಹೇಳಿದ ಮೇಲೆ ಪುರಾಣ-ಪ್ರವಚನ ಜೊತೆಗೆ ಭಜನಾ ಕಂಪನಿಯನ್ನು ಕಟ್ಟಿ ಹಳ್ಳಿ-ಹಳ್ಳಿಗಳಿಗೆ ತಮ್ಮ ಪ್ರದರ್ಶನ ನೀಡಿದರು. ಜಾನಪದ ಸಾಹಿತ್ಯದಲ್ಲಿ ಭಜನಾ ಪದಗಳು ಪ್ರಮುಖ ಸ್ಥಾನವನ್ನು ಪಡೆದಿವೆ ಇವುಗಳಲ್ಲಿ ಕೈವೈಲ್ಯ ಪದ್ದತಿ ಹಾಗೂ ಬಿಡಪದ (ಸ್ವತಃ ಪದಕಟ್ಟಿ ಹಾಡುವುದು) ಎಂದು ಹೇಳಬಹುದು. ಈ ಎರಡರಲ್ಲಿಯೂ ಹಾಡುವ ಕಲೆಯನ್ನು ಶ್ರೀ ಸಿದ್ಧಗಿರಿ ಸ್ವಾಮಿಗಳು ಹೊಂದಿದ್ದು. ಅದರಲ್ಲಿಯೇ ವಿಶೇಷವಾಗಿ ಶ್ರೀ ಮನ್ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ದತಿಯಲ್ಲಿಯ, ಸ್ಥಲದ ಪ್ರಕಾರದ ಹಾಡುಗಳನ್ನು ಉತ್ತರ ಕರ್ನಾಟಕದಲ್ಲಿ ಮೊದಲು ಹಾಡಲು ಪ್ರಾರಂಭಮಾಡಿದವರೆಂದರೆ ಶ್ರೀ ಸಿದ್ಧಗಿರಿ ಸ್ವಾಮಿಗಳೇ ಸರಿ.

ಇವರು ಹಾಡುವ ಪದಗಳಿಗೆ ತಲೆದೂಗದ ವಿದ್ವಾಂಸರಿಲ್ಲ. ಹಾಡನ್ನು ಕೇಳಿ ಸಂತೋಷಭರಿತರಾದ ಜನರು ಇವರನ್ನು ಪದ ಮುಗಿದ ಮೇಲೆ ಎತ್ತಿಕೊಂಡು ಕುಣಿದಾಡಿದ ಉದಾಹರಣೆಗಳುಂಟು.

ಪ್ರತಿವರ್ಷವು ಹುಲ್ಯಾಳದ ಶ್ರೀ ಶಂಭುಲಿಂಗ ಶಿವಾಚಾರ್ಯರ ಯೋಗಾಶ್ರಮ ಮಠದಲ್ಲಿ ಭಾರತ ಹುಣ್ಣಿಮೆಯ ಆಚರಣೆ ಇರುತ್ತದೆ ಅಲ್ಲಿ ಒಮ್ಮೆ ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯನಯ ಪೀಠದಿಂದ ಡಾ. ಆರ್. ಸಿ. ಹಿರೇಮಠ, ಡಾ. ವೃಷಬೇಂದ್ರ ಸ್ವಾಮಿ, ಡಾ. ಸುಂಕಾಪೂರ ಈ ಎಲ್ಲ ಪ್ರತಿಬಾನ್ವಿತರು ಬಾಗಿಯಾಗಿ ಉಪನ್ಯಾಸ ನೀಡುವ ಕಾರ್ಯಕ್ರಮ ವಿತ್ತು. ಇದು ಕಾರ್ಯಕ್ರಮದ ಒಂದು ಅಂಗವಾಗಿ ಕಂಡು ಬಂದರೆ, ಭಜನೆಯ ಕಾರ್ಯ್ಯಕ್ರಮವು ಆ ಸುಂದರ ಮಹೋತ್ಸವದ ಇನ್ನೊಂದು ಮಹತ್ವದ ಅಂಗವಾಗಿ ಜರುಗುತ್ತಿತ್ತು. ಇದೇ ಮಹೋತ್ಸವದ ಸಂದರ್ಭದಲ್ಲಿ ಶ್ರೀ ಶಂಭುಲಿಂಗ ಶಿವಾಚಾರ್ಯರು, ಶ್ರೀ ಸಿದ್ಧಗಿರಿ ಸ್ವಾಮಿಗಳ ಭಜನಾ ವೈಖರಿಯನ್ನು ಕಂಡು ಅವರಿಗೆ 'ಶಿವಭಜನಾ ಧುರಿಣ' ಎಂಬ ಬಿರುದನ್ನು ನೀಡಿದರಲ್ಲದೆ ಬಂಗಾರದ ಪದಕನ್ನು ಬಹುಮಾನವಾಗಿ ಕೊಟ್ಟರು, ಇವರ ಭಜನಾ ಪದಗಳ ವೈಶಿಷ್ಟ್ಯ ಕೇಳದ ಜನರಿಲ್ಲ. ನಿಜಗುಣರ ಪದಗಳಿಗೆ ಇವರು ಅಳವಡಿಸಿದ ರಾಗ ತಾಳಗಳನ್ನು ಇಂದಿನ ಭಜನಾ ಮೇಳಗಳು ಇನ್ನೂ ಹಾಡುತ್ತವೆ ಎಂದು ಹೇಳಿದರೆ ಅಚ್ಚರಿಯ ಸಂಗತಿಯೇ ಸರಿ.

ಸಾಧು ಸದಾಶಿವನಾಗಿ ಜಗತ್ತಿಗೆ ಭೋಧಿಸಿ ತನ್ನ ಪದವನ್ನಿತ್ತ ಎಂಬ ಶ್ರೀಮನ್ನಿಜಗುಣ ಶಿವಯೋಗಿಗಳ ಉಕ್ತಿಯಂತೆ ಅಖಂಡ ಸಚ್ಚಿದಾನಂದ ಪರಬ್ರಹ್ಮ ಸ್ವರೂಪನಾದ ಶಂಭುಲಿಂಗನೆ ಉಪಾಧಿಯಿಂದ ಅನೇಕ ಸಾಧು ಸತ್ಪುರುಷರ ರೂಪದಲ್ಲಿ ಬಂದು ಜಗತ್ತಿನ ಮುಮುಕ್ಷುಗಳಿಗೆಲ್ಲಾ ತತ್ವೋಪದೇಶಗಳನ್ನು ಮಾಡಿ ಅವರಿಗೆ ಮೋಕ್ಷವನ್ನು ಕೊಡುವವನಾಗಿದ್ದಾನೆ ಅಂಥ ಮಹಾ ಸತ್ಪುರುಷರಲ್ಲಿ ಒಬ್ಬರು ಶ್ರೀ ಸಿದ್ಧಗಿರಿ ಸ್ವಾಮಿಗಳೆಂದು ಜನರು ನಂಬಿದ್ದಾರೆ.

ಕನ್ನಡ ಭಾಷೆಯಲ್ಲಿ ಸೊರೆಗೊಂಡ ಶ್ರೀ ಮನ್ನಿಜಗುಣರ ನಿಜಗುಣ ನಿಲಯವನ್ನು ಸ್ಥಾಪಿಸಿ ಅಲ್ಲಿ ಕೈವಲ್ಯ ಪದ್ಧತಿ ಪರಮಾನು ಭವಬೋಧ, ಅನುಭವಸಾರ, ಪರಮಾರ್ಥ ಗೀತೆ, ವಿವೇಕ ಚಿಂತಾಮಣಿ ಹಾಗೂ ವಿಚಾರ ಸಾಗರ ಪಂಚದಶಿ, ಮುಂತಾದ ಗ್ರಂಥಗಳನ್ನು ಹೃದ್ಗತವನ್ನಾಗಿ ಮಾಡಿಕೊಂಡಿದ್ದಾರೆ.

ತತ್ವ ಜಿಜ್ಞಾಸೆಯನ್ನೇ ತಮ್ಮ ಜೀವನದ ಉಸಿರನ್ನಾಗಿಸಿಕೊಂಡಿರುವ ಈ ಮಹಾನುಭಾವರು ಜನ ಸಾಮಾನ್ಯರಿಗೂ ಕೂಡಾ ಆಧ್ಯಾತ್ಮದ ತಿರುಳನ್ನು ತಿಳಿಸುವ ಸುಮಧುರವಾದ ಸೃಜನಶೀಲ ಶೈಲಿಯನ್ನು ಸಾಧಿಸಿಕೊಂಡಿದ್ದರಲ್ಲದೆ ಅರಗಿಸಿಕೊಂಡಿದ್ದರೆಂಬುದ್ದಕ್ಕೆ ನಿದರ್ಶನಗಳು ಇವೆ.

ಒಮ್ಮೆ ಮಹಾಲಿಂಗಪುರದಲ್ಲಿ ರಾತ್ರಿ ೧೨ ಗಂಟೆಗೆ ತಾವು ಭಜನಾ ಪದ್ಯಗಳನ್ನು ಹೇಳುತ್ತಿರುವಾಗ ತಮ್ಮ ಸುಪುತ್ರಿ ಯೊಬ್ಬಳು ಮೃತಪಟ್ಟ ಸುದ್ಧಿಯನ್ನು ಕೇಳಿಯೂ ನಿರ್ವಿಕಾರವಾಗಿಯೇ ಭಜನೆ ಸಾಗಿಸಿದರು, ಇದುವೆ ಅವರ ಮೋಹರಹಿತ ಬಾಳಿನ ದಿವ್ಯ ಸಂದೇಶವಾಗಿದೆ.

ಇದಲ್ಲದೆ ಇವರು ನೂರಾರು ತತ್ವಪದಗಳನ್ನು ಬರೆದಿದ್ದಾರೆ. ಸಾಹಿತ್ಯ ಸಂಗೀತ ಕಲೆ ಹಾಗೂ ಆತ್ಮಾನುಭವ ಈ ತ್ರಿವೇಣಿ ಸಂಗಮ ಒಂದಡೆಯಲ್ಲಿ ಸಿಗುವುದು ಅಸಂಭವ. ಈ ಎಲ್ಲವುಗಳನ್ನ ಶ್ರೀ ಸಿದ್ಧಗಿರಿ ಸ್ವಾಮಿಗಳು ಬಾಲ್ಯದಿಂದಲೇ ಬೆಳೆಸಿಕೊಂಡು ಬಂದಿದ್ದರೆಂದು ಹೇಳಬಹುದು.

---

ಶ್ರೀ ಸಿದ್ದಗಿರಿ ಸ್ವಾಮಿಗಳ ಪ್ರಶಸ್ತಿ ಪತ್ರ ಹಾಗೂ ಅವರ ಪದ ಕೇಳಿದ ಪ್ರೇಕ್ಷಕರಿಂದ ಮಾಹಿತಿ ಪಡೆಯಲಾಯಿತು.

## ೩.೭ ಶ್ರೀ ಸಿದ್ದಗಿರಿ ಸ್ವಾಮಿಗಳ ಕೃತಿಗಳು

### ಗಿರೀಶ ಗೀತೆ ಶತಕ

ಶ್ರೀ ಸಿದ್ದಗಿರಿ ಸ್ವಾಮಿಗಳು ಬರೆದ ಗಿರೀಶ ಶತಕವು ಪ್ರಾಸ ಒಳ ಪ್ರಾಸಗಳಿಂದ ಕೂಡಿದ್ದು ಹಾಡಲು ಯೋಗ್ಯವಾಗಿದೆ. ಮತ್ತು ಸಿದ್ದಗಿರಿ ಸ್ವಾಮಿಗಳ ಈ ಶತಕಗಳಲ್ಲಿ ಶರಣರು, ವಚನಗಳ ಪ್ರಭಾವ ದಟ್ಟವಾಗಿ ಕಾಣುತ್ತವೆ. ಅದರಲ್ಲಿಯೂ ಅಲ್ಲಮ ಪ್ರಭು, ಅಕ್ಕ ಮಹಾದೇವಿ, ಬಸವಣ್ಣನವರ ವಚನಗಳ ಪ್ರಭಾವ ಅಲ್ಲಲ್ಲಿ ಹೆಚ್ಚು ಸಿಗುತ್ತವೆ. ಕೆಲವು ವಚನದ ಸಾಲುಗಳು ಇಲ್ಲಿ ಕೂಡ ಕಾಣಸಿಗುತ್ತವೆ. ದೈವ ಹಂಬಲದಿಂದ ಭಕ್ತಿಯಿಂದ ಪ್ರಾರ್ಥನೆ ಮಾಡಿದ ಭಾವ ತುಮುಲಗಳು ಭಾಷೆಯಲ್ಲಿ ಪಡಿಮೂಡಿವೆ ಪ್ರಾಸಯುಕ್ತ ಈ ಶತಕಗಳು ಓದಿನ ಸಾಹಿತ್ಯಕ್ಕಿಂತಲೂ ಹಾಡಿದಾಗ ಅವು ಎಷ್ಟು ಸೋಗಸಾಗಿ ಕೇಳಿ ಬರುತ್ತವೆಂಬುದು ಇಲ್ಲಿಯ ವಿಶೇಷತೆಯಾಗಿದೆ. ಮಾಯಾ ಮಲೀನನಾಗಿ ಮೋಹದ ತೆಕ್ಕೆಗೆ ಸಿಲುಕಿ ಭವದಲ್ಲಿ ನಾವು ಬಂದು ಬಳಲುತ್ತಿದ್ದೇವೆ. ಶ್ರೀ ಗಿರೀಶ ನೀನೇ ನನ್ನನ್ನು ಕಾಯಬೇಕು. ಮೊರೆಯಬೇಕು ಎಂಬ ಶರಣಾಗತ ಭಾವವೇ ಇಲ್ಲಿನ ಎಲ್ಲ ಶತಕಗಳ ಸ್ಥಾಯೀ ಭಾವವಾಗಿದೆ. ಆನಂದವೇ ಚಂದಾ ನಿರುತ ಆನಂದವೇ ಚಂದಾ ಎಂದು ದೇವರನ್ನು ಕಾಣಬಯಸುವ ಭಕ್ತಿಭಾವದ ಈ ಆನಂದ ಹಾಡಿಗಾಗಿ ಕಿವಿಗೆ ಸೋಂಕಿದರೆ ನಮ್ಮ ಮನಸ್ಸಿಗೂ ಚಂದ ಅನಿಸುತ್ತದೆ. ಜಗವೆಲ್ಲ ತುಂಬಿ ನಭವೆಲ್ಲ ಬೆಳಗಿ ಬ್ರಹ್ಮವದು ಪೂರ್ಣ ಎಂದು ದೇವರನ್ನು ಮನದುಂಬಿ ಹಾಡಿದ್ದಾರೆ. ಹರಿಹರ ಬರೆದ ಪಂಪಾಶತಕ ರಕ್ಷಾ ಶತಕದ ಛಾಯೆ ಇದ್ದು ಅದರ ಸಾಲಿಗೆ ಇದು ಸೇರುವುದಾಗಿದೆ.

ಮುಖ್ಯವಾಗಿ ಇಲ್ಲಿನ ಶತಕಗಳಲ್ಲಿ ಸರ್ಪಭೂಷಣ ಶಿವಯೋಗಿಗಳ ಮತ್ತು ನಿಜಗುಣ ಶಿವಯೋಗಿಗಳ ಹಾಡುಗಳ ಪ್ರಭಾವವಂತೂ ಕಂಡು ಬರುತ್ತದೆ. ಸತ್-ಚಿತ್ ಆನಂದ ಮಯವಾದ ಪರಾತ್ ಪರವಸ್ತು ಪರಶಿವನನ್ನು ಕುರಿತು ಇಂತಹ ಅನನ್ಯಭಾವದ ಭಕ್ತಿರಸ ತುಂಬಿದ ಈ ಹಾಡುಗಳು ಸದಾ ನಮ್ಮ ಕಿವಿಗೆ ಬಿದ್ದರೆ ಜೀವನ ಮುಕ್ತರಾಗುವುದರಲ್ಲಿ ಯಾವ ಸಂದೇಹವೇ ಇಲ್ಲ ಎಂದು ಜನ ನಂಬಿದ್ದಾರೆ.

ಈ ಗಿರೀಶ ಗೀತೆ ಶತಕದಲ್ಲಿ ಭಕ್ತಿ ಸ್ಥಲದ ಪ್ರಾರಂಭದ ಗೀತೆ ಇದಾಗಿದೆ.

**ರಾಗ–ಹಮೀರ          ತಾಳ – ಝಂಪಾ**

ಶರಣೆಂಬೆ ಗುರುವರಾ ।  ಸುರವಂಧ್ಯಗಂಭೀರಾ ।
ಪರಮ ಕರುಣಾಕರಾ । ವರದಯಾಸಾಗರಾ।
ಘ್ರಮೂರ್ತಿ ಸ್ವರೂಪನೇ । ತ್ರಿಮಾತೆ ಶಕ್ತಿನೀನೇ
ತ್ರೈಮಂಡಲಧಿಪನೆ । ಶ್ರೀ ಮನ್ನಿರಂಜನನೆ      ॥ ೧ ॥

ಪಂಚ ಬ್ರಹ್ಮರೂಪನೇ । ಪಂಚಭೂತ ಭರಿತನೆ ।
ಪಂಚಾಸ್ಯಭಾಕ್ಷರನೇ । ಮಿಂಚಾಗ್ನಿ ಚಂದ್ರನೆ      ॥ ೨ ॥

ಮಾಯಾಮಲತೀತನೇ । ಕಾಯಗುಣ ದೂರನೆ ।
ಮೇಯಾದರಹಿತನೇ । ರಾಯಶ್ರೀ ಗಿರೀಶನೆ      ॥ ೩ ॥

## ಮಂಗಲ ಗೀತೆ

ಕನ್ನಡ ಸಾಹಿತ್ಯ ತೀವ್ರಗತಿಯಿಂದ ಬೆಳೆಯುತ್ತಲಿದೆ. ಆ ಸಾಹಿತ್ಯದಲ್ಲಿ ಶರಣ ಸಾಹಿತ್ಯದ ಪಾತ್ರ ಬಹಳ ಮಹತ್ವವಾದದ್ದು, ಇದನ್ನು ಉಳಿಸುವ ಮತ್ತು ಬೆಳೆಸುವ ನಿಟ್ಟಿನಲ್ಲಿ ಧಾರವಾಡದ ಮುರುಘಾ ಮಠದವರು, ಹುಬ್ಬಳ್ಳಿ ಮೂರು ಸಾವಿರ ಮಠದವರೂ ಗದುಗಿನ ತೋಂಟದಾರ್ಯ ಮಠದವರು, ಮುಂಡರಗಿ ಅನ್ನದಾನೇಶ್ವರ ಮಠದವರೂ, ಇಲಕಲ್ಲದ ವಿಜಯ ಮಹಾಂತ ಮಠದವರೂ ಸಾಕಷ್ಟು ಪರಿಶ್ರಮ ಪಡುತ್ತಿರುವುದು ಸ್ತುತ್ಯಾರ್ಯದ ಸಂಗತಿಯಾಗಿದೆ. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎಂಬಂತೆ ಈ ಕೃತಿಯನ್ನು ಮರೇಗುದ್ದಿ ಶ್ರೀ ಅಡವಿ ಸ್ವಾಮಿ ಮಠದವರು ಪ್ರಕಟಿಸಿದ್ದಾರೆ. ಹಗೂ ಈ ಭಾಗದಲ್ಲಿ ಪ್ರಸಿದ್ಧ ಪುರಾಣಿಕರೆಂದು ಹೆಸರಾದ ಮಧುರಖಂಡಿಯ ಶ್ರೀ ಸಿದ್ಧಗಿರಿ ಸ್ವಾಮಿಗಳಿಂದ ರಚಿತವಾದ 'ಮಂಗಲ ಗೀತೆ' ಯು ಅಂಕಲಗಿ ಅಡವಿಸಿದ್ದೇಶ್ವರರ ಕೃಪೆಯಿಂದ ಮತ್ತು ನವಲಗುಂದದ ನಾಗಲಿಂಗ ಶಿವಯೋಗಿಗಳ ಗುರುಗಳಾದ ತಲೆಕಟ್ಟದ ಶ್ರೀ ನಿರುಪಾಧಿ ಸ್ವಾಮಿಗಳ ಆಶೀರ್ವಾದದಿಂದ ರಚಿತಗೊಂಡಿದೆಯೆಂದು ಸಿದ್ದಗಿರಿ ಸ್ವಾಮಿಗಳು ತಿಳಿಸಿದಾರೆ.

ನಿರುಪಾದೀಶನೆಂಬ ಅಂಕಿತನಾಮದಿಂದಿರುವ ಮಂಗಲಗೀತೆಗಳು ಶ್ರೀ ನಿರುಪಾದಿ ಶಿವಯೋಗಿಗಳಿಂದಲೂ ಗಿರೀಶನೆಂಬ ಅಂಕಿತದಿಂದಿರುವ ಗೀತೆಗಳು ಸಿದ್ದಗಿರಿ ಸ್ವಾಮಿಗಳಿಂದ ರಚಿಸಲ್ಪಟ್ಟದ್ದು ಈ ಮಂಗಲಗೀತೆ ಪುಸ್ತಕದಲ್ಲಿವೆ. ಈ ಪುಸ್ತಕದ ಒಂದು ಪದ್ಯವನ್ನು ಉಲ್ಲೇಖಿಸಲಾಗಿದೆ.

**ರಾಗ – ಮಾಲ ಕೌಂಸ ತಾಳ – ತ್ರಿತಾಳ**

ಬಾರೇ ಮಂಗಲ ಮಾಡುವ ಮಧುರೇ
ತೋರೆ ಸುಮಂಗಲೆ ಕುರುಹ ಸದಾರೆ ॥ ೧ ॥
ವಿದಿತ ವಿಧಾನಿಯ ಬೊಧಾಶ್ರಮದಿ
ಪದಕೆ ಕ್ರಮಾಂಗದಿ ಸಾಧಸಿ ಧಾರೆ ॥ ೨ ॥
ನೇರ ಸುಧಾಚಾಒರ್ಯೆದರ ಗುರಿಯ ವಿಚಾರ
ಸದಾಹದ ಒಲಿಸಿ ಸಸಾರೇ ॥ ೩ ॥

ಮೇರು ಸಕೀಲ ವಿಶಾಲ ವಿವರಣ ಮ-
ಯೂರ ಸ್ಥಲೋತ್ತರ ರುಚಿಸುತ ಶುಚಿರೇ ॥ ೪ ॥
ಜಂಗಮ ಪುಂಗನ ಪಾದ ಸುಶೋಭನ
ಸಂಗಿ ಪ್ರಸಂಗ ಚಿದಂಗ ಪ್ರೀಯಾರೇ ॥ ೫ ॥
ಮೇರೆ ಬಯಲ ಕಲೆ ಸಹಜನುಭವದಿ ಸು-
ಧಾರಿ ನಿತಾಂತ ಮಜಾ ಸವಿ ತಾರೇ ॥ ೬ ॥
ಸರಸ ಪ್ರಸಾದತೆ ಲಾಲಸೆ ಸರಸಿ
ನಿರುಪಾಧೀಶನ ಶರಣ ಸತೀರೇ[೫] ॥ ೭ ॥

## ಶ್ರೀ ಸಿದ್ದಲಿಂಗೇಶ್ವರ ಸ್ತುತಿ

ಈ ಜನಗತ್ತಿನಲ್ಲಿ ಕಂಡುಬರುವ ಮಾನವಕೋಟಿಯಲ್ಲವು ಸ್ವಾಭಾವಿಕವಾಗಿ ಬಯಸುವುದೇನೆಂದರೆ ಯಾವಾಗಲೂ ತಮಗೆ ನಿತ್ಯಸುಖವು ದೊರೆಯಲಿ ಎಂದು ಮಾನವನ ಹೆಬ್ಬಯಕೆ, ಕಷ್ಟಗಳು ಎಂದೂ ಬರಬಾರದು, ಸುಖವು ನಮ್ಮ ಕೈ ಬಿಟ್ಟು ಹೋಗಬಾರದು. ಇದಕ್ಕಂತಲೆ ಶಾಸ್ತ್ರವು ಅತ್ಯಂತ ದುಃಖನಿವೃತ್ತಿ ಪರಮಾನಂದ ಪ್ರಾಪ್ತಿ ಲಕ್ಷಣಾತ್ಮಕ ಮೋಕ್ಷವೆಂದು ಹೇಳುತ್ತದೆ. ಇಂಥ ಮೋಕ್ಷಕ್ಕೆ ಪರಂಪರಾಗತ ಸಾಧನೆಗಳಲ್ಲಿ ಶಿವಪೂಜೆ, ಶಿವಧ್ಯಾನ, ಶಿವವ್ರತಾದಿಗಳು ಹಾಗೂ ಗುರುಸೇವೆ, ಗುರುಭಜನೆ, ಗುರುನಾಮವನ್ನು ಕುರಿತು ಪಠಣ ಪುರಾಣ–ಪ್ರವಚನಗಳು ಮುಖ್ಯವೆಂದು ಎಲ್ಲ ಮಹಾತ್ಮರ ಅಭಿಮತ ವಿರುವುದರಿಂದ ಮಧುರಖಂಡಿಯ ಕಮರಿ ಮಠಾಧೀಶರಾದ, ಶ್ರೀ ಸದ್ಗುರು ಸಿದ್ದಲಿಂಗ ಯತಿಗಳ ಸ್ತುತಿಯನ್ನು ಅಕಾರಾಧಿ –ಜ–ಕಾರಾಂತವಾಗಿ ಪ್ರಾಸಯುಕ್ತತೆಯಿಂದ ಈ ಸಣ್ಣ ಹೊತ್ತಿಗೆಯಲ್ಲಿ ಅಳವಡಿಸಲಾಗಿದೆ. ಮತ್ತೆ ಕೆಲವೊಂದು ಮಂಗಳಗೀತೆಗಳನ್ನು ಕ್ರಮವಾಗಿ ಜೋಡಿಸಲಾಗಿದೆ ಕಾರಣ ಗುರುಭಕ್ತರೆಲ್ಲರೂ ಪಠಣ ಪಾರಾಯಣದಂದಾಗಲಿ ಸ್ವರ, ತಾಳ ಬದ್ದವಾಗಿರುವ ಭಜನೆಯಿಂದಾಗಲಿ ನುತಿಸಿ–ಸ್ತುತಿಸಿ ಸದ್ಗುರು ಸಿದ್ದಲಿಂಗೇಶನ ಕರುಣೆ ಪಡೆದು ಮೋಕ್ಷಸ್ಥಿತಿ ಪ್ರಾಪ್ತಿ ಮಾಡಕೊಳ್ಳಬೇಕು. ಎಂದು ಪುಸ್ತಕದಲ್ಲಿ ಹೇಳಲಾಗಿದೆ. ಈ ಪಸ್ತಕದ ಒಂದು ಗೀತವು ಹೀಗಿದೆ.

## ಶ್ರೀ ಸದ್ಗುರು ಸಿದ್ಧಲಿಂಗೇಶ್ವರನ ಸ್ತೋತ್ರವು

ಶ್ರೀ ಸದ್ಗುರು ಸಿದ್ಧಲಿಂಗ ಯತಿವರೇಣ್ಯ ನಂ ।
ಭಾಸುರ ಯೋಗಿಕುಲ ತಿಲಕನಂ ॥
ಪಾಶಾಷ್ಟಕದಿಂ ಕುದಿವ ನರರುದ್ಧರಿಪನಂ ।
ಸೂಸುತಿಹ ಮಾನಸದಿಂ ಭಜಿಪೆನಾಂ ॥ ೧ ॥

ಚಂಡಕರ ಕೋಟಿ ಪ್ರಕಾಶನೇ ।
ಪಿಂಡ ಬ್ರಹ್ಮಾಂಡ ಮಂಡಿತನೇ ॥
ರುಂಡಮಾಲಾಲಂಕೃತನೇ ।
ಖಂಡಿಸೆನ್ನಭವ ಗುರುಸಿದ್ಧಲಿಂಗನೇ ॥ ೨ ॥

ಮೂಜಗದೊಡೆಯಾನಿನ್ನೋಜೆಯಿಂಧಜಿಪೆ ।
ರಾಜೀವ ಲೋಚನಜ ರುದ್ರರೂಪಾ ॥
ರಾಜಾಧಿರಾಜ ಸಿದ್ಧಲಿಂಗ ಸದ್ಗುರು ।
ರಾಜಿಸುವ ಶ್ರೀ ಶೈಲವಾಸ ಗಿರೀಶಾ ॥ ೩ ॥

ತ್ರೈಮೂರ್ತಿ ಸ್ವರೂಪನೇ ।
ತ್ರೈಮಂಡಲಾಧಿಪನೇ ॥
ಭೌಮಾವಿದ್ಯಾವಿಸರನೇ
ಶ್ರೀ ಮದ್ಗುರು ಸಿದ್ಧಲಿಂಗನೇ ॥ ೪ ॥

ಕಾರುಣ್ಯ ಪಾರಾವಾರನೇ ।
ಧಾರುಣಿಯ ಧರ್ಮಮೂಲನೇ ॥
ತಾರುಣ್ಯ ತಮಂದ ಸರ್ಯನೇ ।
ತಾರಿಸೆನ್ನಭವ ಸಿದ್ದಲಿಂಗನೇ ॥ ೫ ॥

## ದೃಷ್ಟಾಂತ ದೀಪ್ತಿ

ಜೀವನವೆಂಬುದು ಒಂದು ಕಥೆ ಇದ್ದಂತೆ ಕಥೆಯೇ ಒಂದು ಜೀವನ ವೆಂಬುದು ಸಿದ್ಧ ಜೀವನವು ಯಾವುದೇ ಮೂಲದಿಂದಾಗಿ ಸಾಗಿ ಅಂತ್ಯಗೊಂಡು ಕಥಾರೂಪಕ್ಕೆ ಬಂದು ತಲುಪುತ್ತದೆ. ಅಧಿಕಾಂಶವಾಗಿ ಕಾಲ್ಪನಿಕ ಕಥೆಗಳಿಗಿಂತ, ಘಟನಾ ಪ್ರಧಾನ ಕಥೆಗಳು ಮೂಡಿ ಬರುವುದು ಹೆಚ್ಚು ಕಥೆಗಳು ವೇದ ಪುರಾಣ ಮಹಾ ಕಾವ್ಯಗಳಲ್ಲಿ ಕಂಡು ಬರುತ್ತವೆ.

ನಿಜಾನುಭವಿಯ ದೃಷ್ಟಿಯಲ್ಲಿ ಬಂದ ಘಟನೆಗಳು ಅವರ ಅಂತರಾಳಕ್ಕೆ ಸೇರಿ ಅದರ ಅನುಭವ ವಿಭಾವ ಸಂಚಾರಿ ಭಾವದಲ್ಲಿ ತೋರಿ ಕೊನೆಗೆ ಒಂದು ನಿರ್ಣಯಕ್ಕೆ ಬಂದು ಸ್ವರ ರೂಪಕ್ಕೆ ಬರುವುದೇ ಕಥೆ. ದೃಷ್ಟಾಂತ ರೂಪದಲ್ಲಿ ಬಂದು ದೃಷ್ಟಾಂತದಲ್ಲಿ ಸಂಯೋಜನೆಗೊಂಡು ಸಮಾಪ್ತಿಗೊಂಡಾಗ ಆಗ ತಕ್ಕಂತಹ ಅನುಭವ ಆನಂದ ದೀಪ್ತಿಯಂತೆ ಹೊಳೆದು ತೋರುತ್ತದೆ. ತೃಪ್ತಿಗೊಂಡವನಲ್ಲಿ ಆವ ಹೇಳಿಕೆ ಕೇಳಿಕೆಯುಂಟೋ ಅದು ಬೆಳಗುವ ಪ್ರಕಾಶಕ್ಕೆ ಸಮಾನ. ಅದು ಮೌನದಿಂದ ತನ್ನ ಸ್ಥಿತಿ ತಿಳಿಸಿದಾಗ ಅದನ್ನು ಮೌನವಾಗಿಯೇ ಅರಿತು ಆನಂದಿಸುವುದು ಅನುಭವಿಯ ರೀತಿ ಈ ರೀತಿಯಲ್ಲಿ ಓದುಗರ ಹೃದಯಕ್ಕೆ ಆನಂದವನ್ನುಂಟು ಮಾಡತಕ್ಕಂತಹ ಹಲವಾರು ಕಥೆಗಳು[೭] ಈ ಕಥಾ ಮಾಲಿಕೆಯಲ್ಲಿವೆ. ಅವು ಚಿಕ್ಕ ಪ್ರತಿಭೆಯಾಗಿ ಓದುಗರಿಗೆ ತೃಪ್ತಿಯನ್ನು ಕೊಡಲಿಕ್ಕೆ ಯೋಗ್ಯವೆನಿಸಿದೆ. ತಮ್ಮದೇ ಆದ ರೀತಿಯಲ್ಲಿ ಸಿದ್ದಗಿರಿ ಸ್ವಾಮಿಗಳು ನಿರೂಪಿಸಿದ್ದಾರೆ. ಭಕ್ತರ ಹೃದಯ ವೈಶಾಲತೆಯ ಪ್ರತಿರೂಪವೇ ಈ ಕೃತಿಯಾಗಿದೆ.

ಒಟ್ಟಾರೆಯಾಗಿ ಶ್ರೀ ಸಿದ್ಧಗಿರಿ ಸ್ವಾಮಿಗಳು ತಮ್ಮ ಲಿಖಿತ ಕೃತಿಗಳ ಮುಕಾಂತರ ಹಾಗೂ ಮೌಖಿಕ ಪುರಾಣ-ಪ್ರವಚನಗಳನ್ನು ಮಾಡುವುದರ ಮುಕಾಂತರ ಒಂದು ನೈತಿಕ ಸಮಾಜವನ್ನು ನಿರ್ಮಿಸಲು ಪ್ರತ್ನಿಸಿರುವುದನ್ನು ನೋಡಬಹುದು.

## ೩.೮ ಸಿದ್ದಗಿರಿ ಸ್ವಾಮಿಗಳ ಕಾಲದ ಇತರ ನಟರು

### ಶ್ರೀ ಸಿದ್ದಗಿರಿ ಸ್ವಾಮಿಗಳು ರೂಪಿಸಿದ

### ೧ 'ಸಂಪೂರ್ಣ ಹೇಮರಡ್ಡಿ ಮಲ್ಲಮ್ಮ' ನಾಟಕದಲ್ಲಿ ಅಭಿನಯಿಸಿದ ನಟರ ಹೆಸರುಗಳು ಹೀಗಿವೆ.

**ಪುರುಷ ವರ್ಗದವರು :**

ಮಲ್ಲಿಕಾರ್ಜುನ : ಬಸಲಿಂಗಯ್ಯ ಹಿಡಕಲ್

ಬರಮರಡ್ಡಿ : ಶಿವಮೂರ್ತಯ್ಯ ರೂಡಲಬಂಡಿ

ಹೇಮರಡ್ಡಿ : ಶಂಕ್ರಯ್ಯ ಮಠಪತಿ

**ಸ್ತ್ರೀ ವರ್ಗದವರು :**

ಮಲ್ಲಮ್ಮ : ಶ್ರೀ ಸಿದ್ದಗಿರಿ ಸ್ವಾಮಿಗಳು

ಅತ್ತೆ : ಬಸಲಿಂಗಪ್ಪ ಮಾಳೆದ

ಬಸಮ್ಮ : ಮಲ್ಲಯ್ಯ ಮ. ಮಠಪತಿ

ನಾಗಮ್ಮ : ದುಂಡಪ್ಪ ಪರಪ್ಪನವರ

### ೨ ಶ್ರೀರಾಮ ಪಾದುಕಾ ಪಟ್ಟಭೀಷೇಕ ನಾಟಕದಲ್ಲಿ ಅಭಿನಯಿಸಿದ ನಟರ ಹೆಸರುಗಳು

**ಪುರುಷ ವರ್ಗದವರು**

ಶ್ರೀರಾಮ– ಶ್ರೀ ಸಿದ್ದಗಿರಿ ಸ್ವಾಮಿಗಳು

ದಶರಥ– ರಾಮಪ್ಪಾ ಭಾವಿಮನಿ

ಲಕ್ಷ್ಮಣ– ಗುರುಪಾದ ಕಕಮರಿ

ಭರತ – ಮಹಾಲಿಂಗಯ್ಯ ರೂಡಲಬಂಡಿ

ಸುಮಂತಃ – ವಿರುಪಾಕ್ಷಪ್ಪ ಕತ್ತೇವಾಡಿ

ವಶಿಷ್ಠ – ಚನ್ನಪ್ಪ ಹಳೇಮನಿ

ಕೋತವಾಲ– ರಾಚಪ್ಪ ಅಥಣಿ

ಶುಂಭುಕ –ರಾಯಪ್ಪ ಕಾಮಗೊಂಡ

ನಾರಾಯಣದಾಸ – ಪರಶುರಾಮ ಜಾಧವ

ಶೆಟ್ಟಿ – ಚನಪ್ರಭು ಬೀಳಗಿ

ಗುಹಕ – ಗುರುಪಾದಯ್ಯ ಜವಳಗಿ

ನರಸ – ನಾಗಪ್ಪ ಸಿಡ್ಡಿಮನಿ

**ಸ್ತ್ರೀ ವರ್ಗದವರು.**

ಕೈಕೆಯಾ– ಮಲ್ಲಯ್ಯ ಮಧರಖಂಡಿ

ಸೀತಾ– ಹಣಮಂತ ಹಡಲಗಿ

ಮಂಥರೆ – ಚಿನ್ನಪ್ಪ ಕಾಮಗೊಂಡ

ಮಾಲತಿ–ಗುರುಪಾದ ಚಿಂಚಖಂಡಿ

ದಾಸಿ– ಶಂಕರ ಬಡಿಗೇರ

**ಸಂಗೀತ ಬಳಗ**

ಹಾರ್ಮೋನಿಯಂ – ಹಣಮಂತ ಜಾಧವ

ತಬಲಾಜಿ – ಅಣ್ಣಪ್ಪ ಜಮಖಂಡಿ

ಫಿಡಲ – ಚಿದಂಬರ ನಿಂಬರಗಿ

**೨ ಚಿತ್ರಾಂಗದ ನಾಟಕದಲ್ಲಿ ಅಭಿನಯಿಸಿದ ನಟರ ಹೆಸರುಗಳು**

**ಪುರುಷ ವರ್ಗದವರು**

* ಶ್ರೀ ಕೃಷ್ಣ – ಶ್ರೀ ಸಿದ್ದಗಿರಿ ಸ್ವಾಮಿಗಳು
* ಬಬ್ರುವಾಹನ– ಅರುಣಕುಮಾರ ಶಾಹ
* ಅರ್ಜುನ ಟಿ. ಗುರುರಾಜ
* ಶಕುನಿ – ಈಶ್ವರಪ್ಪ ಜಿರ್ಲಿ

**ಸ್ತ್ರೀ ವರ್ಗದವರು**

ಚಿತ್ರಾಂಗದ–ಮುರುಗೋಡ ರೇಣುಕಾ

**೪ ಕುರುಕ್ಷೇತ್ರ ನಾಟಕದಲ್ಲಿ ಅಭಿನಯಿಸಿದ ನಟರ ಹೆಸರುಗಳು ಹೀಗಿವೆ**

**ಪುರುಷ ವರ್ಗದವರು**

ಶ್ರೀ ಕೃಷ್ಣನ ಪಾತ್ರ – ಸಿದ್ದಗಿರಿ ಸ್ವಾಮಿಗಳು

ಅಭಿಮನ್ಯು –ಅರುಣಕುಮಾರ ಶಾ

ಭೀಮ – ಟಿ.ಗುರುರಾಜ

ಅರ್ಜುನ – ಶಿವಲಿಂಗಯ್ಯ ಬುರ್ಲಿ

ದ್ರೋಣಚಾರ್ಯ–ಪಿಡಶೆಟ್ಟಿ

ದುಶ್ಯಾಸನ – ಸದಾಶಿವ ಬಿರಾದಾರ

ದುರ್ಯೋದನ – ನಂದಯ್ಯ ಜಂಬಗಿ

**ಸ್ತ್ರೀ ವರ್ಗದವರು**

ದ್ರೌಪದಿ – ಲಕ್ಷ್ಮೀ

**ಟಿಪ್ಪಣಿ**

| | | |
|---|---|---|
| ೧) | ಬಿ. ಪುಟ್ಟಸ್ವಾಮಯ್ಯ – ಜನಪದ ರಂಗಭೂಮಿ. | ಪುಟ – ೪೦ |
| ೨) | ಅದೇ | ಪುಟ –೪೧ |
| ೩) | ರಾಮಕೃಷ್ಣ ಮರಾಠೆ – ಉತ್ತರ ಕರ್ನಾಟಕ ರಂಗಭೂಮಿ. | ಪುಟ – ೯೦ |
| ೪) | ಅದೇ | ಪುಟ–೩೩೦ |
| ೫) | ಸಂ. ಎ. ಬಿ. ಮಠಪತಿ – ಗಿರೀಶ ಗೀತೆ ಶತಕ. | ಪುಟ – ೧ |
| ೬) | ಶ್ರೀ ರಾಜಶೇಖರ ದೇವರು – ಮಂಗಲ ಗೀತೆ. | ಪುಟ – ೧ |
| ೭) | ಶ್ರೀ ಸಿದ್ದಗಿರಿ ಸ್ವಾಮಿಗಳು – ಶ್ರೀ ಸಿದ್ದಲಿಂಗೇಶ್ವರ ಸ್ತುತಿ. | ಪುಟ – ೧ |
| ೮) | ಶ್ರೀ ಸಿದ್ದಗಿರಿ ಸ್ವಾಮಿಗಳು – ದೃಷ್ಟಾಂತ ದೀಪ್ತಿ. | ಪುಟ – ೧ |

---

ಶ್ರೀ ಸಿದ್ದಗಿರ ಸ್ವಾಮಿಗಳ ಜೊತೆಯಲ್ಲಿ ಪಾತ್ರ ಮಾಡಿದವರಿಂದ ಮಾಹಿತಿ ಸಂಗ್ರಹಿಸಲಾಯಿತು.

ಶ್ರೀ ಸಿದ್ದಗಿರಿ ಸ್ವಾಮಿಗಳ ವಂಶಸ್ತರಲ್ಲದೆ ಮಧುರಖಂಡಿಯಲ್ಲಿ ರಂಗ ಕಲಾವಿದರ ಅನೇಕ ಮನೆತನಗಳಿರುವುದು. ಈ ನಾಟಕದ ಪಾತ್ರದಾರಿಗಳಿಂದ ತಿಳಿದು ಬರುತ್ತದೆ.

# ಅಧ್ಯಾಯ ೪

## ಶ್ರೀ ಸಿದ್ಧಗಿರಿ ಸ್ವಾಮಿಗಳ ನಂತರದ ಕಾಲ

ಪುಟ – ೭೫-೮೫

ಅಧ್ಯಾಯ – ೪

## ೪. ಸಿದ್ದಗಿರಿ ಸ್ವಾಮಿಗಳ ನಂತರದ ಕಾಲ

ರಂಗ ಕಲಾವಿದರಾದ ಶ್ರೀ ಸಿದ್ದಗಿರಿ ಸ್ವಾಮಿಗಳು ನಾಟಕ ಕಲೆ ಎನ್ನುವದು ಜನರ ಮನಸ್ಸನ್ನು ಸಂತಸಗೊಳಿಸುವ ಸುಮಧುರ ಕಲೆಯಾಗಿದೆ. ಈ ಕಲೆಯ ಕೇವಲ ಭೂದಿ ಮುಚ್ಚಿದ ಕೆಂಡವಾಗಬಾರದು, ಅದು ಪ್ರಕಾಶ ಬೀರುವ ದೀಪವಾಗಬೇಕೆಂದುಕೊಂಡರು. ತಮ್ಮ ಊರಿನಲ್ಲಿರುವ ಮತ್ತು ಅವರ ಆಪ್ತರೂ ಆಗಿರುವ ಶ್ರೀ ಕೊಟ್ರಯ್ಯ ಗವಿಮಠ, ಅವರೊಂದಿಗೆ ಸೇರಿ ಇವರು ಶಾಲೆಯಲ್ಲಿ ವಿದ್ಯಾರ್ಥಿಗಳಿಗೆ ಪಾಠ ಹೇಳುವುದರೊಂದಿಗೆ ಅಭಿನಯಿಸುವ ಕಲೆಯನ್ನು ಹೇಳಿಕೊಡುತ್ತಿದ್ದರು. ಅಭಿನಯಿಸುವಲ್ಲಿ ತಪ್ಪಿದ ವಿದ್ಯಾರ್ಥಿಗಳಿಗೆ ಚಡಿ ಏಟು ಕೊಡುತ್ತಿದ್ದರು. ಎಂದು ಈಗಲೂ ವಿದ್ಯಾರ್ಥಿಗಳು ನೆನಪಿಸಿಕೊಳ್ಳುತ್ತಾರೆ. ಮಧುರಖಂಡಿಯ ನಾಟಕ ಶಾಲೆಯಲ್ಲಿಯೂ ನಾಟಕ ಕಲಿಸುವ ಸಂದರ್ಭದಲ್ಲಿ ಇವರಿಬ್ಬರೂ ನಟರಿಗೆ ಅಭಿನಯ ಹೇಳಿಕೊಡುತ್ತಿದ್ದರು. ತಪ್ಪಿದಲ್ಲಿ ಹಾಗಲ್ಲ ಈ ರೀತಿಯಿಂದ ಮಾಡಿದರೆ ಸರಿಯಾಗುತ್ತದೆಂದು ಅಭಿನಯಿಸಿ ಪಾತ್ರದಾರಿಗಳಿಗೆ ಹೇಳಿಕೋಡುತ್ತಿದ್ದರು. ಮುಂದೆ ಈ ಪ್ರಾಥಮಿಕ ಶಾಲೆಯ ಶಿಕ್ಷಕರಿಗೆ ಇವರ ಜಾಣ್ಮೆ ಹಾಗೂ ಇವರಲ್ಲಿರುವ ಪಾಂಡಿತ್ಯ ಗುರುತಿಸಿ ೧೯೯೩ರಲ್ಲಿ ಕರ್ನಾಟಕ ಸರಕಾರವು ರಾಜ್ಯದ ಅದರ್ಶ ಶಿಕ್ಷಕ ಪ್ರಶಸ್ತಿ ನೀಡಿ ಗೌರವಿಸಿತು.

ಈ ಊರಿನಲ್ಲಿ ನಾಟಕ ಅಭಿನಯವನ್ನು ಶ್ರೀ ಸ್ವಾಮಿಗಳಿಂದ ಕಲಿತ ವಿದ್ಯಾರ್ಥಿಗಳು ರಂಗ ಪರಂಪರೆಯನ್ನು ಜೀವಂತವಾಗಿ ಇಟ್ಟುಕೊಂಡಿದ್ದಾರೆ. ಇವರ ಶಿಷ್ಯರಲ್ಲಿ ಒಬ್ಬರಾದ ಶ್ರೀ ಉಮೇಶ ಸಿದರಡ್ಡಿಯವರು ಅಭಿನಯಿಸಿದ ವೀರ ಸಂಗೊಳ್ಳಿ ರಾಯಣ್ಣ ನಾಟಕ ಬಹಳ ಪ್ರಸಿದ್ಧಿ ಪಡೆದಿದೆ. ಹಾಗೂ ಅವರ ಮಮ್ಮಕ್ಕಳಿಂದ ಪ್ರದರ್ಶಿಸಿಲ್ಪಟ್ಟ ಸಂಪೂರ್ಣ ಹೇಮರಡ್ಡಿ ಮಲ್ಲಮ್ಮ ನಾಟಕವು ಸಹ ಪ್ರಸಿದ್ಧಿ ಪಡೆದಿದೆ.

---

*ಮಧುರಖಂಡಿ ಗ್ರಾಮಸ್ಥರಿಂದ ಕೇಳಿತಿಳಿದು ಕೊಳ್ಳಲಾಯಿತು.

## ೪.೧. ಶ್ರೀ ಸಿದ್ಧಗಿರಿ ಸ್ವಾಮಿಗಳ ನಂತರದ ಪೀಳಿಗೆಯ ನಾಟಕಗಳು

### ವೀರ ಸಂಗೊಳ್ಳಿ ರಾಯಣ್ಣ.

**ಸಾರಾಂಶ**

ನಾಡಿನ ಸ್ವಾತಂತ್ರ್ಯಕ್ಕಾಗಿ ದುಡಿದ ಮಹಾನ್ ಚೇತನಗಳಲ್ಲಿ ತುಂಬಿದ್ದು ಅಪಾರವಾದ ದೇಶಪ್ರೇಮ ಹಾಗೂ ನಿಷ್ಟುರತೆ. ಇಂತಹ ಧೀರ ಮಹನೀಯರಾದ ಭಗತಸಿಂಗ್, ಸುಭಾಷಚಂದ್ರ, ಗಾಂಧೀಜಿ, ಲಾಲ್, ಬಾಲ್ ಪಾಲ, ಚಂದ್ರಶೇಖರ ಆಜಾದ ಭಾರತದಾದ್ಯಂತ ಹೋರಾಟದ ಮುಂಚೂಣಿಯಲ್ಲಿ ಇರುವ, ಸ್ವಾತಂತ್ರ್ಯ ಸಂಗ್ರಾಮದಲ್ಲಿ ಭಾಗವಹಿಸಿದ ಮಹನೀಯರು ಭಾರತದ ತುಂಬೆಲ್ಲ ಸ್ವಾತಂತ್ರ್ಯಕ್ಕಾಗಿ ಹೋರಾಟ ನಡೆದಾಗ ಕರ್ನಾಟಕದಲ್ಲಿ ಅದೇರೀತಿಯ ಪರಕೀಯರ ವಿರುದ್ದ ಸಿಡಿದೆದ್ದ ಕಿಡಿಗಳು ಬೆಳವಡಿಯ ಮಲ್ಲಮ್ಮ, ಕಿತ್ತೂರು ಚೆನ್ನಮ್ಮ, ನರಗುಂದದ ಬಾಬಾಸಾಹೇಬ, ರಾಣಿ ಅಬ್ಬಕ್ಕದೇವಿ, ಅಮಟೂರ ಬಾಳಪ್ಪ, ಹಾಗೂ ಇನ್ನು ಅನೇಕರು. ಅವರುಗಳಲ್ಲಿ ಅತ್ಯಂತ ಧೀರ ಹಾಗೂ ದೇಶಪ್ರೇಮಿ, ಸ್ವಾತಂತ್ರ್ಯ ಹುಲಿ, ಕನ್ನಡ ಕಲಿಕೇಸರಿ ಎಂದು ಕರೆಸಿಕೊಂಡಿರುವವ 'ವೀರ ಸಂಗೊಳ್ಳಿ ರಾಯಣ್ಣ'

'ರಾಯಣ್ಣ' ಒಬ್ಬ ಸಾಮಾನ್ಯ ಓಲೆಕಾರ ಕಿತ್ತೂರು ಸಂಸ್ಥಾನದಲ್ಲಿ ಕೆಲಸಮಾಡುತ್ತಿದ್ದ ಆತನ ಧೀರತನವನ್ನು ಹಾಗೂ ಸಾಹಸದ ಕೆಲಸಗಳನ್ನು ಸೈನ್ಯದಲ್ಲಿ ಆಗಾಗ ಹೊಗಳುತ್ತಿದರು. ದೇಶದ, ನಾಡಿನ ಸ್ವಾತಂತ್ರ್ಯಕ್ಕೋಸ್ಕರ ನಮ್ಮ ಜನರ ದಾಸ್ಯ ಸ್ವಭಾವವನೂ ನೋಡಿ ಬೇಸತ್ತು ಸಾಕಷ್ಟು ಜನರ ಮುಂದೆ ತನ್ನ ಅನಿಸಿಕೆಗಳನ್ನು ಮಾತನಾಡುತ್ತಿದ್ದ ಈ ಎಲ್ಲ ಸುದ್ದಿ ರಾಣಿ ಚೆನ್ನಮ್ಮಳಿಗೆ ತಿಳಿಯಿತು. ರಾಯಣ್ಣನ ಬಗ್ಗೆ ಅವರಿಗೂ ಕುತೂಹಲ ಮೂಡಿತು.

'ರಾಯಣ್ಣ' ಹಾಲುಮತದ (ಕುರುಬ) ಜನಾಂಗಕ್ಕೆ ಸೇರಿದವ ಅವನ ತಂದೆ ಭರಮಪ್ಪ ತಾಯಿ ಕೆಂಚವ್ವ ಹಾಗೂ ತಂಗಿ ಮಾಯಕ್ಕ ಇದು ಅವನ ಕುಟುಂಬ. ಸೈನ್ಯದಲ್ಲಿ ಸೇರಿ ದೇಶಸೇವೆ ಮಾಡಬೇಕೆಂಬ ಹೆಬ್ಬಯಕೆಯಿಂದ ರಾಯಣ್ಣಾ ಸೈನ್ಯಸೆರಿದ್ದ. ಮಲ್ಲಸರ್ಜದೊರೆಗಳು ಕಿತ್ತೂರು ಸಂಸ್ಥಾನದ ರಾಜರು ತೀರಿಕೊಂಡು ಬಳಿಕ ಕಿತ್ತೂರಿನ ಸಲುಹುವಹೊಣೆ ಚನ್ನಮ್ಮ ಮತ್ತು ವೀರಮ್ಮಳಗೆ ಬಂದೊದಗಿತು. ಆಗ ರಾಣಿ ಚನ್ನಮ್ಮ

ಥ್ಯಾಕರೆಯೊಡನೆ ಹೋರಾಟಮಾಡಿ ಕಿತ್ತೂರನ್ನು ರಕ್ಷಿಸಿಕೊಳ್ಳಬೇಕಾಯಿತು. ಇದು ಕಿತ್ತೂರಿನ ವಿಷಯವನ್ನು ರಾಷ್ಟ್ರದಾದ್ಯಂತ ನೆನಪಿಟ್ಟುಕೊಳ್ಳುವಂತಾಯಿತು. ನಂತರ ಬಂದ ಬ್ರಿಟಿಷ ರಾಯಭಾರಿ (ರಿಕರಿಂಗ್) ಚಾಪ್ಲೇನ್ (ಗವರ್ನರ) ಥ್ಯಕರೆಯ ಸಾವಿನ ನಂತರ ಇಂಗ್ಲೀಷರಿಗೆ ತುಂಬಾ ಕೋಪ ಬಂದಿತ್ತು. ಕಾರಣದಿಂದ ಚಾಪ್ಲೇನ್ ಯುದ್ದಕ್ಕೆ ಬಂದು ಬಿಡುತ್ತಾನೆ. ನಾಡಿನ ಜನರೊಡನೆ ಆನಂದದಿಂದ ರಾಣಿ ಚೆನ್ನಮ್ಮ ಇದ್ದಕ್ಕಿದ್ದಹಾಗೆಯೇ ಯುದ್ದಕ್ಕೆ ಸಜ್ಜಾಗುತ್ತಾಳೆ. ಅರಮನೆಗೆ ಯುದ್ದದ ಸಮಾಚಾರವನ್ನು ತಿಳಿಸಿ ಒಪ್ಪಂದ ಮಾಡಿಕೊಳ್ಳಿ ಎಂದು ಹೇಳಲು ಚಾಪ್ಲೇನ್ ಬರುತ್ತಾನೆ. ಈ ಸಂದರ್ಭದಲ್ಲಿ ರಾಜಗುರುಗಳಾದ ಶ್ರೀಗುರುಸಿದ್ದೇಶ್ವರರು, ಮಂತ್ರಿಗಳು, ಬೆಳವಡಿಯ ಬಿಚ್ಚುಗತ್ತಿಯ ಚನ್ನಬಸಪ್ಪ, ಎಚ್ಚರಪ್ಪ, ರಾಯಣ್ಣ ಚೆನ್ನಮ್ಮ ಇವರೆಲ್ಲರ ಸಮ್ಮುಖದಲ್ಲಿಯೇ ಒಪ್ಪಂದ ಮಾಡಿಕೊಳ್ಳಲು ಚಾಪ್ಲೇನ್ ಕೇಳುತ್ತಾನೆ ಸಿಟ್ಟಿಗೆದ್ದ ರಾಯಣ್ಣ ಖಡ್ಗದಿಂದ ರುಂಡ ಹಾರಿಸಲು ಹೋದಾಗ ಚನ್ನಮ್ಮ ತಡೆದು. ನಮ್ಮ ರಾಜ್ಯಕ್ಕೆ ಬಂದ ಅತಿಥಿಯನ್ನು ಹೀಗೆ ಮಾಡುವುದು ಸರಿಯಲ್ಲ ಎಂದು ಗೌರವಿಸಿ ಕಳುಹಿಸಿಕೊಡುತ್ತಾಳೆ, ಹಾಗೆಯೇ ಯುದ್ದಕ್ಕೆ ಬರಲು ಅನುಮತಿಯನ್ನು ಸಮ್ಮತಿಸುತ್ತಾಳೆ.

ಥ್ಯಾಕರೆಯ ಯುದ್ದಕ್ಕಿಂತ ಮೊದಲು ಓಲೆಕಾರನಾಗಿದ್ದ ರಾಯಣ್ಣ. ಚಾಪ್ಲೇನ್ ಯುದ್ದಕ್ಕೆ ಬಂದಾಗ ಚನ್ನಮ್ಮ ರಾಣಿಯ ಅಂಗರಕ್ಷಕನಾಗಿರುತ್ತಾನೆ ಕೋಟೆಯ ಹೊರಗಡೆ ಬೀಡು ಬಿಟ್ಟ ಚಾಪ್ಲೇನ್ ಮರುದಿನವೇ ಯುದ್ದಕ್ಕೆ ಏರಿ ಬರುತ್ತೇನೆ.

'ಶಂಭೋ ಹರಹರ ಮಹಾದೇವ' ಎಂಬ ಜಯಘೋಷದೊಂದಿಗೆ ಕೋಟೆಯ ಬಾಗಿಲನ್ನು ತೆರೆದು ಬಿಡುತ್ತಾರೆ. ಚನ್ನಮ್ಮ ರಾಣಿಯು ಹೋರಾಟದ ಬಗೆಯನ್ನು ಮೊದಲ ಯುದ್ದದಲ್ಲಿ ಕಂಡ ಇಂಗ್ಲೀಷರ ಸೈನ್ಯ ದಂಗಾಗುತ್ತದೆ. ಆಗ ಚಾಪ್ಲೇನ್ ನರಿ ಬುದ್ದಿಯನ್ನು ಉಪಯೋಗಿಸಿ ಆಸೆ ತೋರಿಸಿ ಕೃಷ್ಣಜಿ ಪಂಥ ಎನ್ನವ ಪುರೋಹಿತನಿಂದ ಕಿತ್ತೂರಿನ ಮದ್ದು ಗುಂಡು ಶಸ್ತ್ರಾಸ್ತ್ರ ಇರುವ ಕೋಣೆಗೆ ಶಗಣೆಯನೀರು (ಹೆಂಡಿ-ದನಗಳ ಮಲಮೂತ್ರ) ಸುರಿದು ಬಿಡುತ್ತಾರೆ, ಈ ಕಾರಣದಿಂದ ಕಿತ್ತೂರಿನ ವೀರರು ಎಷ್ಟು ಪ್ರಯತ್ನ ಪಟ್ಟರೂ ಮದ್ದುಗುಂಡುಗಳು ಸಿಡಿಯದಾದಾಗ ಸೈನ್ಯ ಕರಗತೊಡಗುವುದು. ಆಗ ರಾಯಣ್ಣ ಒಂದು ಕಡೆ, ಚನ್ನಮ್ಮ ಒಂದು ಕಡೆ, ಹೋರಾಡುತ್ತಿರುತ್ತಾರೆ ಚೆನ್ನಮ್ಮನನ್ನು ಮೋಸದಿಂದ ಬ್ರಿಟೀಷರು ಸೆರೆ ಹಿಡಿಯುತ್ತಾರೆ. ಹಾಗೂ ಬೈಲಹೊಂಗಲದ ಕಾರಾಗೃಹಕ್ಕೆ ಕರೆದೊಯ್ಯತ್ತಾರೆ. ಇನ್ನೊಂದೆಡೆ ಯುದ್ಧ

ಮಾಡುತ್ತಿದ್ದ ರಾಯಣ್ಣನಿಗೆ ತಿಳಿದು ಕಂಗಾಲಾಗುತ್ತಾನೆ. ನಂತರ ಕಿತ್ತೂರು ಸಂಸ್ಥಾನ ಸಂಪೂರ್ಣ ಬ್ರಿಟೀಷರ ವಶವಾಗುತ್ತದೆ. ರಾಯಣ್ಣ ಚೆನ್ನಬಸಣ್ಣ, ಎಚ್ಚ್ಯಾರೆ ಇವರೆಲ್ಲ. ತಪ್ಪಿಸಿಕೊಂಡು ಕಾಡು ಸೇರಿಕೊಳ್ಳತ್ತಾರೆ.

ಬೂದಿ ಮುಚ್ಚಿದ ಕೆಂಡದಂತೆ ಅಲ್ಲಲ್ಲಿ ಅವಿತು ಕುಳಿತು ಕಾಡಿನಲ್ಲಿರುವ ಕೆಲವು ಜನಾಂಗದ ಜನರನ್ನು ಭೆಟ್ಟಿಯಾಗುತ್ತ ಚೆನ್ನಮ್ಮ ರಾಣಿಯ ಸಂಸ್ಥಾನದ ಪರಿಯನ್ನು ಹೇಳುತ್ತಾ ಅವರನ್ನೆಲ್ಲ ಮತ್ತೆ ಸೈನ್ಯದ ಗುಂಪುಗಳನ್ನಾಗಿ ಪರಿವರ್ತಿಸಲು ತೊಡಗುತ್ತಾನೆ. ಈ ಸಂದರ್ಭದಲ್ಲಿ ಒಬ್ಬ ಹೆಂಗಸಿನ ಮಾನ ಕೆಡಿಸುವ ಗುಂಪೊಂದು ರಾಯಣ್ಣನ ಕಣ್ಣಿಗೆ ಬಿಳುತ್ತದೆ, ತಕ್ಷಣ ಅವಳ ಮಾನ ರಕ್ಷಸಿ, ಆ ಗುಂಪಿಗೆ ಬುದ್ಧಿ ಮಾತುಗಳನ್ನು ಹೇಳಿ ದೇಶದ ಪರಿಸ್ಥಿತಿ ಹಾಗೂ ನಮ್ಮ ಜನರ ದಾಸ್ಯದ ಬಗ್ಗೆ ತಿಳಿಸಿದಾಗ ಆ ಗುಂಪಿನ ಮುಖಂಡ ಗಜವೀರ ಅವನು ರಾಯಣ್ಣನಿಗೆ ಶರಣಾಗುತ್ತಾನೆ. ತನ್ನ ಗುಂಪಿನೊಂದಿಗೆ ರಾಯಣ್ಣನ ಸ್ನೇಹ ಬಯಸುತ್ತಾನೆ. ಒಂದಾಗಿ ಸೈನ್ಯವನ್ನು ಬಲಪಡಿಸಿಕೊಳ್ಳತ್ತಾರೆ.

ಬ್ರಿಟೀಷರ ಸೆರೆಯಿಂದಾಗಿ ಚೆನ್ನಮ್ಮ ಬೈಲಹೊಂಗಲ ಕಾರಾಗೃಹದಲ್ಲಿರುತ್ತಾಳೆ. ಕಾರಣದಿಂದಾಗಿ ಸೈನ್ಯದಲ್ಲಿ ಶಸ್ತ್ರಾಸ್ತ್ರಗಳನ್ನು ತಯಾರಿಸಲು ಸೈನ್ಯದ ಇತರ ಖರ್ಚಿಗೆ ದುಡ್ಡು ಬೇಕಾಗುತ್ತದೆ ಆಗ. ತನ್ನ ತಾಯಿ ಕೆಂಚವ್ವ ಹಾಗೂ ತಂಗಿ ಮಾಯಕ್ಕನ ಮನೆಗೆ ರಾತ್ರಿ ಹೋದಾಗ ಕುಡಿಯಲು ಹಾಲುಕೊಡುತ್ತಾಳೆ. ಹಾಲು ಕುಡಿಯುವಾಗ ತಾಯಿಯು ತಡೆದು. ಪ್ರಮಾಣ ಮಾಡಿಸುತ್ತಾಳೆ. ಹೆತ್ತ ತಾಯಿಯ ಮೇಲೆ ಹಾಗೂ ಭೂತಾಯಿ ಮೇಲೆ ಪ್ರತಿಜ್ಞೆಮಾಢಿ ಎಲ್ಲರೂ ಹಾಲು ಕುಡಿದು ಕೆಂಚವ್ವಳ ಅಪ್ಪಣೆಯ ಮೇರೆಗೆ ವೀರಮ್ಮಳ ತಂದೆ ಶಿವಗುತ್ತಿಯ ಚಂದ್ರಸೇನ ದೊರೆಗೆ ಭೆಟ್ಟಿಯಾಗಲು ಹಣ ಕೇಳಲು ಹೋಗುತ್ತಾನೆ. ಆ ರಾಜ್ಯದಲ್ಲಿ ಒಕ್ಕಳ ಭರಮ ಎಂದು ಪುಂಡ ರಾಜ್ಯದ ಬೊಕ್ಕಸವನ್ನು (ಹಣ) ಕಸಿದುಕೊಂಡು ರಾಜನನ್ನು ತನ್ನ ಕೈ ಗೊಂಬೆ ಮಾಡಿಕೊಂಡಿರುತ್ತಾನೆ. ರಾಜನಿಂದ ಈ ಸುದ್ಧಿ ತಿಳಿದ ರಾಯಣ್ಣ ಒಕ್ಕಳಭರಮನನ್ನು ಹೊಡೆದು ಹಾಕುತ್ತಾನೆ. ಆಗ ಶಿವಗುತ್ತಿಯ ಚಂದ್ರಸೇನ ದೊರೆಯಿಂದ ಅಪಾರ ಹಣ, ಸಂಪತ್ತು, ಸೈನ್ಯ ಸಿಕ್ಕು ರಾಯಣ್ಣನಿಗೆ ಸಹಾಯ ವಾಗುತ್ತದೆ.

ಶಿವಗುತ್ತಿಯಿಂದ ಹೊರಟ ರಾಯಣ್ಣ ಬೈಲಹೊಂಗಲ ಕಾರಾಗೃಹಕ್ಕೆ ಸಾಧು ವೇಷದಲ್ಲಿ ಬರುತ್ತಾನೆ. ಸಂತ ಮಹಂತರ ದರ್ಶನಕ್ಕೆ ಚೆನ್ನಮ್ಮಳಿಗೆ ಮುಕ್ತ ಅವಕಾಶ

ಇರುತ್ತದೆ. ಭೆಟ್ಟಿಯಾದ ರಾಯಣ್ಣನ, ಸಾಧುವೇಷ ಅರಿಯದ ಚೆನ್ನಮ್ಮ ಕಾಲಿಗೆ ನಮಸ್ಕರಿಸಲು ಬರುತ್ತಾಳೆ ಆಗ ರಾಯಣ್ಣ ತನ್ನ ನಿಜರೂಪ ತೊರಿಸಿ ತಾಯಿಯ ಕಾಲಿಗೆ ನಮಸ್ಕರಿಸಿ ಅವಳಿಂದ ಆರ್ಶಿವಾದ ಪಡೆದು ಅವಳಿಂದ ಬಂಗಾರದ ಬಳೆಗಳನ್ನು ಪಡೆದು ಬರುತ್ತಾನೆ.

ಈ ನಡುವೆ ಸೈನ್ಯ ದೊಡ್ಡದಾಗಿರುತ್ತದೆ. ಖರ್ಚಿಗಾಗಿ ಬೀಡಿ, ಸಂಪಗಾಂವ, ಬೈಲಹೊಂಗಲ ತಾಲೂಕಿನ ಟ್ರೆಜರಿಗಳನ್ನು (ಸರಕಾರಿ) ಒಡೆದು ಲೂಟಿಮಾಡಿ ಕಛೇರಿಗಳನ್ನು ಸುಡುತ್ತಾನೆ. ಅನೇಕ ಇಂಗ್ಲೀಷರ ಅಧಿಕಾರಿಗಳನ್ನು ಹಾದಿಯುದ್ಧಕ್ಕೂ ಕೊಂದು ಹಾಕುತ್ತಾನೆ. ಇದನ್ನೆಲ್ಲ ಅರಿತ ಬ್ರೀಟಿಷ ಸರಕಾರ ಅವನನ್ನು ಹಿಂಸಿಸಲು ಹೊಂಚು ಹಾಕುತ್ತದೆ. ಕುಲಕರ್ಣಿ ಬಾಳಾಜಿರಾವ್ ಹಾಗೂ ಮಾಮ್ಲೆದಾರ ಕೃಷ್ಣಗೌಡ ಹಾಗೂ ಕುದಾನಪುರ ಲಿಂಗನಗೌಡ ನೇಗಿನಾಳ ವೆಂಕನಗೌಡ ಇವರೆಲ್ಲರನ್ನು ಕೂಡಿಕೊಂಡು ಇಂಗ್ಲೀಷರು ಸಂಚು ನಡೆಸುತ್ತಾರೆ.

ರಾಯಣ್ಣ ಆಗಾಗ ಅವನ ತಂಗಿ ಮಾಯಕ್ಕನ ಮನೆಗೆ ಹೋಗಿ ಬರುತ್ತಿರುತ್ತಾನೆ. ವಿಜಯ ದಶಮಿ ದಿನ ಆರತಿ ಮಾಡಿಸಿಕೊಂಡು ಬರಲು ತಂಗಿ ಮನೆಗೆ ಹೋದಾಗ, ರಾತ್ರಿ ಹೊತ್ತಿನಲ್ಲಿ ಕೆಲವು ಬ್ರೀಟಿಷ ಅಧಿಕಾರಿಗಳಿಗೆ ಗೊತ್ತಾಗಿ, ಗುಂಡು ಹಾರಿಸಿ ಕೊಲ್ಲಲು ಪ್ರಯತ್ನ ಮಾಡುತ್ತಾರೆ. ಆಗ ಆ ಗುಂಡು ತಂಗಿಗೆ ತಾಕಿ ಮಾಯಕ್ಕ ಸಾಯುತ್ತಾಳೆ ನಂತರ ಕೋಪಗೊಂಡು ಆ ಅಧಿಕಾರಿಗಳನ್ನೆಲ್ಲ ಕೊಂದು ಮತ್ತೆ ಅಡವಿ ಸೇರಿಕೊಳ್ಳುತ್ತಾನೆ.

ರಾಯಣ್ಣನ ತಂಗಿ ಗಂಡ ಲಕ್ಕಪ್ಪ ಆತನೂ ವಾಲಿಕರ, ಅವನನ್ನು ಮನವೊಲಿಸಿ ರಾಯಣ್ಣನನ್ನು ಹಿಡಿದುಕೊಡಲು ಆತನಿಗೆ ಆಸೆ ಹುಟ್ಟಿಸುತ್ತಾರೆ. ರಾಯಣ್ಣ ಕಾಡಿನಲ್ಲಿ ಸೈನ್ಯದೊಂದಿಗೆ ಇರುತ್ತಾನೆ ಸೋದರಮಾವ ಎನಿಸಿಕೊಂಡು ತಂಗಿಯನ್ನ ಮದುವೆಯಾದ ಲಕ್ಕಣ್ಣನಿಗೆ ೪ ಹಳ್ಳಿ ಜಾಗೀರು ಭಾರಿ ಬಹುಮಾನದ ಇನಾಮು ಕೊಡವೆನೆಂದು ಸರಕಾರ ಆಸೆ ಹುಟ್ಟಿಸುತ್ತದೆ. ಅದಕ್ಕಾಗಿ ರಾಯಣ್ಣನ ಭೆಟ್ಟಿಗೆ ಕಾಡಿಗೆ ಹೋಗುತ್ತಾನೆ. ಮಾವನೆಂದು ತಿಳಿದು ವಿಶ್ವಾಸದಿಂದ ರಾಯಣ್ಣ ಎಲ್ಲವನ್ನು ಹೇಳುತ್ತಾನೆ ಹಾಗೂ ತನ್ನ ಮಾವನೊಂದಿಗೆ ಊಟ ಮಾಡಲು ಸಿದ್ದನಾಗಿ ಸ್ನಾನಕ್ಕೆ ಹೊಳೆಯಲ್ಲಿ ಇಳಿಯುತ್ತಾನೆ. ತನ್ನ ಬಳಿ ಇರುವ ಬಂಧೂಕು ಮಾವನ ಹತ್ತಿರ ಕೊಡುತ್ತಾನೆ ಆದರೆ ಖಡ್ಗವನ್ನು ಬಾಯಿಯಲ್ಲಿ

ಹಿಡಿದುಕೊಂಡು ಸ್ನಾನಕ್ಕೆ ಹೊಳೆಯಲ್ಲಿ ಈಜು ಬಿಳುತ್ತಾನೆ ಆಗ ಮಾವ ಲಕ್ಕಣ ನಾನು ಇದ್ದೇನೆ ಖಡ್ಗ ನನ್ನ ಹತ್ತಿರ ಕೊಡು ಯಾವುದೇ ಅಂಜಿಕೆಯಿಲ್ಲ ಎನ್ನುತ್ತಾನೆ ಆಗ ಖಡ್ಗವನ್ನು ಮಾವನ ಹತ್ತಿರ ಕೊಡುತ್ತಾನೆ.

ಮುಂಚೆಯೆ ಅಡವಿಯಲ್ಲಿ ಇಂಗ್ಲೀಷರ ದಂಡು ಅಡಗಿಕುಳಿತಿರುತ್ತದೆ. ಇಂಥ ಸಂದರ್ಭದಲ್ಲಿ ರಾಯಣ್ಣ ಹತ್ತಿರ ಯಾವುದೇ ಆಯುಧ ಇರುವುದಿಲ್ಲ. ಆಗ ಲಕ್ಕಣ್ಣ ಸನ್ನೆ ಮಾಡಿ ಸೈನ್ಯವನ್ನು ಕರೆದು ರಾಯಣ್ಣ ನನ್ನು ಹಿಡಿಯಲು ಸೂಚಿಸುತ್ತಾನೆ. ರಾಯಣ್ಣ ಪರಿ ಪರಿಯಾಗಿ ಬೇಡಿಕೊಂಡರೂ ಖಡ್ಗ, ಬಂದೂಕು ಕೊಡುವದಿಲ್ಲ ಅನಾಯಾಸವಾಗಿ ಬಂಧಿಯಾಗಿ ಬಿಡುತ್ತಾನೆ.

ರಾಯಣ್ಣನ ಕೈ ಕಾಲುಗಳಿಗೆ ಗುಂಡು ಬಡಿದಿರುತ್ತದೆ ರಕ್ತ ಸೊರುತ್ತಿದೆ ಕೈಕಾಲುಗಳನ್ನು ಕಟ್ಟಿ ನಂದಗಡಕ್ಕೆ ಒಯ್ಯುತ್ತಾರೆ. ರಾಯಣ್ಣ ಸೆರೆಸಿಕ್ಕ ಸುದ್ದಿ ತಿಳಿದ ವೀರರು ಬಂದು ಸಾಕಷ್ಟು ಹೋರಾಡಿದರೂ ಪ್ರಯೋಜನ ವಾಗುವುದಿಲ್ಲ ಆಗ ರಾಯಣ್ಣನನ್ನ ೧೮೩೬ ಜನೇವರಿ ೨೬ ರಂದು ಗಲ್ಲಿಗೇರಿಸಲು ಗಲ್ಲುಗಂಬದ ಮುಂದೆ ನಿಲ್ಲಿಸಿ ನಿನ್ನ ಕೊನೆಯ ಆಸೆ ಏನೆಂದು ಬ್ರಿಟಿಷ ರಾಯಭಾರಿ ಕೇಳಿದಾಗ, 'ನನ್ನೊಬ್ಬನ ಬಂಧನದಿಂದಾಗಿ ಕನ್ನಡ ನೆಲ ನಿಮ್ಮ ಸ್ವತ್ತಾಯಿತೆಂದು ತಿಳಿಯಬೇಡವೋ ಕೆಂಪು ಕೋತಿ, ನನ್ನಂಥ ರಾಯಣ್ಣ ಮನೆಗೊಬ್ಬ ಹುಟ್ಟಿ ಬಂದು ನಿಮ್ಮನ್ನ ಈ ನೆಲದಿಂದ ಓಡಿಸುತ್ತಾನೆ. ಇದೆ ನನ್ನ ಕೊನೆಯಾಸೆ, ನನ್ನ ಈ ಸತ್ತ ದೇಹವನ್ನು ನಂದಗಡದಲ್ಲಿಯೇ ಹೂಳಬೇಕು. ಮೇಲೆ ಒಂದು ಆಲದ ಮರ ನೆಡಬೇಕು. ಕನ್ನಡ ನೆಲದ ತಾಯಂದಿರು ಗಿಡದ ಬುಡಕ್ಕೆ ಕುಳಿತು ಶಾಂತಿಕೋರಿ ನನಗೆ ಆರ್ಶೀವದಿಸಬೇಕು ಇಷ್ಟು ನನ್ನ ಕೊನೆಯ ಆಸೆ' ಶಂಭೊ ಹರಹರ ಮಹಾದೇವ ಎನ್ನುತಿರುವಾಗ ಗಲ್ಲಿಗೇರಿಸುತ್ತಾರೆ. ರಾಯಣ್ಣ ಅಮರ ನಾಗುತ್ತಾನೆ.

ರಾಯಣ್ಣ ಪ್ರಮುಖ ಪಾತ್ರ ವಹಿಸಿದ ಉಮೇಶ ದುಂಡಪ್ಪ ಸಿದರಡ್ಡಿ ಅತ್ಯಂತ ಭಾವಪೂರ್ಣವಾಗಿ, ದೇಶ ಪ್ರೇಮ ತುಂಬಿದ, ಗಟ್ಟಿಗನಾಗಿ ಪಾತ್ರನಿರ್ವಹಿಸಿದ್ದಾನೆ. ಅದರಂತೆ ಜೊತೆಯಾಗಿ ಎಲ್ಲರೂ ಸಹಕರಿಸಿದ್ದಾರೆ ಇದರ ಪ್ರಮುಖ ಈ ನಾಟಕವನ್ನು ವೇ॥ ಸಿದ್ದಗಿರಯ್ಯ ಸ್ವಾಮಿಗಳು ನಿರ್ದೇಶಿಸಿದ್ದಾರೆ. ದುಃಖದ ಸನ್ನಿವೇಷಗಳ್ನು ಸ್ವತಃ ಅಭಿನಯಿಸಿ ತೋರಿಸಿ ಕಲಿಸಿಕೊಡುತ್ತಿದ್ದರು. ನಾಟಕದ ರಂಗ ಗೀತೆಗಳನ್ನು ಶ್ರೀಗಳೆ ನೀಡಿದ್ದರು. ರಾಯಣ್ಣನನ್ನು ಗಲ್ಲಿಗೇರಿಸಿದಾಗ ಎಲ್ಲಾ ಪ್ರೇಕ್ಷಕರು ಎದ್ದು ನಿಂತು ಗೌರವಿಸಿದರು.

## ರಕ್ತರಾತ್ರಿ

**ಸಾರಾಂಶ**

ಪ್ರಪಂಚದ ಸರ್ವದರ್ಮಗಳಲ್ಲಿ ಹಿಂದು ಧರ್ಮವು ಒಂದು. ಹಿಂದು ಧರ್ಮದ ಮಹಾನ ಕೃತಿಗಳಲ್ಲಿ ರಾಮಾಯಣ ಮತ್ತು ಮಹಾಭಾರತ 'ಭಗವದ್ಗೀತೆ' ಕೃಷ್ಣನನ ಆಶೀರ್ವಾದದ ಪ್ರಸಾದ ಪುರುಷಾರ್ಥದ ಕೃತಿ. ಮಹಾ ಭಾರತದಲ್ಲಿ ಬರುವ ಕೃಷ್ಣವತಾರದ ಪೂರ್ಣ ವಿವರಣೆಯೇ ಈ ಕೃತಿಯಾಗಿದೆ. ಕೃಷ್ಣ ಸಂಕಲ್ಪ ಭಗವಂತನ ಅನುಗ್ರಹ ವಿಲ್ಲದೆ. ಒಂದು ಹುಲ್ಲು ಕಡ್ಡಿ ಕೂಡಾ ಅಲುಗಾಡದು. ಎನ್ನುವಮತೆ ಅವನಿಲ್ಲದೆ ಏನಿಲ್ಲ. ಎಲ್ಲದಕ್ಕು ಕಾರ್ಯ ಕಾರಣ ಕತ್ರು ಎಲ್ಲವು ಅವನೇ.

ಪ್ರಸ್ತುತ 'ರಕ್ತರಾತ್ರಿ' ನಾಟಕ ಮಹಾಭಾರತದ ಕೊನೆಯ ಗಳಿಗೆಯಲ್ಲಿ ಕೌರವ ಮತ್ತು ಪಾಂಡವರ ನಡುವೆ ನಡೆದ ಯುದ್ದ, ಒಂದು ರಾತ್ರಿಯ ಅದು ಕುರುಕ್ಷೇತ್ರ ಯುದ್ದ ೧೮ ದಿನಗಳ ವರೆಗೆ ನಡೆಯಿತು ೧೮ನೇ ದಿನದ ರಾತ್ರಿಯ ಒಂದುದಿನದ ಸನ್ನಿವೇಶವೇ ಕಂದಗಲ್ಲ ಹಣಮಂತರಾಯರ ಮೇರುಕೃತಿ 'ರಕ್ತರಾತ್ರಿ'

**ಹಿನ್ನಲೆ**

ಕೌರವರೆಲ್ಲರು ಹತರಾಗುತ್ತ ಒಂದು ಕೊನೆಗೆ ಉಳಿದವರು ಕರ್ಣ, ದೂರ್ಯೋದನ, ಶಕುನಿ, ಹದಿನೆಂಟನೆಯ ಯುದ್ದ ನಡೆಯಬೇಕಿತ್ತು, ಅಂದು ರಾತ್ರಿ ಅಶ್ವತ್ಥಾಮನಿಗೆ ದುರ್ಯೋದನ ಈ ಕುರಿತಾಗಿ ಸುದ್ದಿ ಕಳುಹಿಸಿದ. ದೋಣಾಚಾರ್ಯರ ಪುತ್ರ ಅಶ್ವತ್ಥಾಮ ಅವನು ಚಿರಂಜೀವಿ. ಹಿಮಾಲಯ ಪರ್ವತದಲ್ಲಿ ತಪ್ಪಸ್ಸಿಗೆ ಹೋಗಿದ್ದ ಕೌರವರು ಹಾಗೂ ದೋಣಾಚಾರ್ಯರು ಯುದ್ದದಲ್ಲಿ ಮರಣ ಹೊಂದಿದ್ದನ್ನು ಕೇಳಿ ಹಸ್ತಿನಾವತಿಗೆ ಬರುತ್ತಾನೆ. ದೂರ್ಯೋದನನ ಅಳಲನ್ನು ಕೇಳಿ ತನ್ನ ತಂದೆಯನ್ನು ಪಾಂಡವರು ಮೋಸದಿಂದ ಕೊಂದರೆಂದು ತಿಳಿದು, ಪಾಂಡವರ ಮೇಲೆ ಕೋಪಗೊಂಡು 'ನಿಃ ಪಾಂತದ ಪೃಥ್ವಿಯನ್ನಾಗಿ' ಮಾಡುವೆನೆಂದು ದುರ್ಯೋದನನ ಎದುರು ಪ್ರತಿಜ್ಞೆಯಿಂದ ಕೃಷ್ಣ ಕೂಡಾ ಗಲಿಬಿಲಿ ಗೊಳ್ಳುತ್ತಾನೆ. ಏಕೆಂದರೆ ಅಶ್ವತಮನನ್ನು ಜಯಿಸುವ ಗಂಡು ಭೂಮಿಯ ಮೇಲಿಯೇ ಇಲ್ಲ ಎಂಬುದು ಕೃಷ್ಣನಿಗೆ ಮಾತ್ರಗೊತ್ತು.

ಆಗ ಅಭಿಮನ್ಯುವಿನ ಹೆಂಡತಿ ಉತ್ತರೆ ಗರ್ಭಿಣಿ ಯಾಗಿರುತ್ತಾಳೆ. ಅಶ್ವತ್ಥಾಮ ಯೋಗಶಕ್ತಿಯಿಂದ ತಿಳಿದು 'ಎಲೆ ಉತ್ತರೆ, ನಿನ್ನ ಗರ್ಭಸ್ಥ ಪಿಂಡಕ್ಕೂ ಪ್ರಳಯ ಎನ್ನುತ್ತಾನೆ. ಮೂರುದಿನ ಕಳೆಯುದರಲ್ಲಿ ಈ ನಿಃ ಪಾಂತದ ಪೃಥ್ವಿಯನ್ನಾಗಿಸುವೆ' ಎಂಬ ಘರ್ಜನೆಯನ್ನು ಕೇಳಿ ಇಡೀ ಪಾಂಡವರೂ ತಲ್ಲಣಗೊಳ್ಳುತ್ತಾರೆ. ಆದರೆ ಅಶ್ವತ್ಥಾಮನಿಗೆ ಪಟ್ಟ ಕಟ್ಟದೆ ಶಕುನಿ ಮೊದಲಾದವರು ಕರ್ಣನಿಗೆ ಪಟ್ಟಕಟ್ಟಿ ಯುದ್ಧಕ್ಕೆ ಕಳಿಹಿಸುತ್ತಾರೆ. ಆದರೆ ಕರ್ಣ ಸಾಯುತ್ತಾನೆ. ನಂತರ ಅಶ್ವತ್ಥಾಮನು ಶಿವನನ್ನು ಕುರಿತಾಗಿ ತಪಸನ್ನಾಚರಿಸುತ್ತಾನೆ. ಶಿವನು ದೇವಕನ್ನಿಕೆ ಯಾಗಿ ಬಂದು ಅಶ್ವತ್ಥಾಮನ ತಪಸ್ಸನ್ನು ಕೆಡಿಸಲು ಪ್ರಯತ್ನಿಸುತ್ತಾನೆ. ಆದರೂ ಅಚಲನಾದ ಅಶ್ವತ್ಥಾಮನ ಭಕ್ತಿಗೆ ಮೆಚ್ಚಿ ಹಣೆಮಣಿಯನ್ನು ನೀಡಿ ಚಿರಂಜೀವಿ ಎಂದು ಆಶಿರ್ವದಿಸುತ್ತಾನೆ. ಹಾಗೆಯೇ ಗರತಿಯ ಶಾಪಕ್ಕೆ ಗುರಿಯಾದರೆ ಹಣೆಮಣಿ ಹಾರಿ ಹೋಗುವದು ಎಚ್ಚರ ಎಂದು ಸೂಚಿಸಿ ಶಿವ ಮಾಯವಾಗುತ್ತಾನೆ.

ಕಲಿದೇವ ಹಾಗೂ ಕೃಷ್ಣ ಇವರ ಸಂವಾದ ಬಹಳ ವಿಡಂಬನಾತ್ಮಕವಾಗಿದೆ. ಕಲಿಕಾಲ ಆಗಮಿಸುತ್ತಿದೆ, ದ್ವಾಪಾರ ಮುಗಿಯುತ್ತಿದೆ. ಕಲಿಕಾಲದಲ್ಲಿ ಬರುವ ಪ್ರಸಂಗಗಳನ್ನು ಕಲಿದೇವ ಮುಂಚೆಯೇ ಹೇಳುತ್ತಾನೆ. ಕಲಿಯುಗದ ಅಂತ್ಯದ ಬಗ್ಗೆಯು ಈ ಸನ್ನಿವೇಶದಲ್ಲಿ ಪ್ರಕಟವಾಗಿದೆ.

ಶಕುನಿ ಕುರುಕ್ಷೇತ್ರದಲ್ಲಿ ಕೌರವರನ್ನು ಯಾವರಿತಿಯಾಗಿ ಬಲಿಕೊಟ್ಟಿದ್ದಾನೆಂಬುದು ಈ ನಾಟಕದಲ್ಲಿ ವ್ಯಕ್ತವಾಗಿದೆ. ಮಹಾಭಾರತಾದ್ಯಂತ ಶಕುನಿ ಪಾಂಡವರ ವಿರೊದಿ ಎಂದು ತಿಳಿದರೂ ಕೃಷ್ಣನು ವೈರಿ ಎಂದು ಅನಿಸಿದರೂ ಆತ ಪಾಂಡವಪಕ್ಷ ಹಾಗೂ ಕೃಷ್ಣ ಪ್ರೇಮಿ. ತನ್ನ ವೈರತ್ವದಿಂದ ಕೌರವರನ್ನು ಸದೆಬಡೆಯುವಲ್ಲಿ ಶಕುನಿಯ ತಂತ್ರ ಅಸಾಮಾನ್ಯ,

ಮಹಾಭಾರತದ ಯುದ್ಧದಲ್ಲಿ ದುರ್ಯೋಧನ ಒಬ್ಬನೇ ಉಳಿಯುತ್ತಾನೆ. ವೈಂಶಪಾಯನದಲ್ಲಿ ಅಡಗಿದ ದುರ್ಯೋಧನನ್ನು ಮೂದಲಿಸಿ ಕರೆದು ಭೀಮ ಗದಾಯುದ್ಧವನ್ನು ಪ್ರಾರಂಭಿಸುವನು. ದುರ್ಯೋಧನನ ತೊಡೆ ಮುರಿದು ಕೆಡವುತ್ತಾನೆ. ಅದೆ ಸಂದರ್ಬಕ್ಕೆ ಸರಿಯಾಗಿ ಅಶ್ವತ್ಥಾಮನು ಬಂದು ದುರ್ಯೋಧನನ ಹೀನ ಸ್ಥಿತಿಯನ್ನು ಕಂಡು ತಾನು ಪಾಂಡವರ ತಲೆ ತರುತ್ತೇನೆ ಎಂದು ಹೋಗುತ್ತಾನೆ.

ಹಿಂತಿರುಗಿದಾಗ ಉಪ ಪಾಂಡವರ ತಲೆ ತಂದಿರುತ್ತಾನೆ. ದ್ರೌಪದಿಯ ದುಃಖಕ್ಕೆ ಅಂದರೆ ಗರತಿಯ ದುಃಖಕ್ಕೆ ಕಾರಣನಾಗುತ್ತಾನೆ. ಮಕ್ಕಳ ರುಂಡಗಳನ್ನು ಕೈಯಲ್ಲಿ ಹಿಡಿದುಕೊಂಡು ಹೋದ ಅಶ್ವತ್ಥಾಮನನ್ನು ಪಾಂಡವರು ಎದುರಾಗಿ ಯುದ್ಧಮಾಡಿ ಕೊಲ್ಲಲು ಪ್ರಯತ್ನಿಸುತ್ತಾರೆ. ಆ ಅಶ್ವತ್ಥಾಮ ಚಿರಂಜೀವಿ ಹಾಗಾಗಿ ಸಾಯುವದಿಲ್ಲ ಆಗ ದ್ರೌಪದಿ ಯುದ್ದಕ್ಕೆ ನಿಲ್ಲಬೇಕಾಗುತ್ತದೆ. ಶಿವನ ವರಪ್ರಸಾದದಿಂದ ಅಶ್ವತ್ಥಾಮನಿಗ ಹಣೆಮಣಿ ದೊರೆತಿರುತ್ತದೆ. ಅದನ್ನು ಗರತಿಯ ಶಾಪಕ್ಕೆ ಗುರಿಯಾದಾಗ ಕಳೆದುಕೊಳ್ಳಬೇಕಾಗುತ್ತದೆ. ಎಂದೂ ಎಚ್ಚರಿಕೆಯನ್ನು ಶಿವನು ನೀಡಿರುತ್ತಾನೆ. ಪ್ರಸ್ತುತ ಪ್ರಸಂಗದಲ್ಲಿ ದ್ರೌಪದಿ ಗರತಿಯಾದ್ದರಿಂದ ಅವಳ ಕೋಪಕ್ಕೆ ಗುರಿಯಾದ ಕಾರಣ ಅಶ್ವತ್ಥಾಮ ಅವಳೊಡನೆ ಯುದ್ಧ ಮಾಡಬೇಕಾಗುತ್ತದೆ.

ಪಾಂಡವರೆಲ್ಲರೂ ಮೂರ್ಛೆ ಹೋಗಿರುತ್ತಾರೆ. ಆಗ ದ್ರೌಪದಿ ಅಶ್ವತ್ಥಾಮನೊಡನೆ ಯುದ್ಧಕ್ಕೆ ನಿಲ್ಲುತ್ತಾಳೆ ಅವಳಿಗೆ ಪಾರ್ವತಿಯ ಆಶಿರ್ವಾದದ ಬಲವಿರುತ್ತದೆ. ಯುದ್ಧ ಪ್ರಾರಂಭವಾಗುತ್ತದೆ.

ಗರತಿಯ ಶಾಪಕ್ಕೆ ಗುರಿಯಾದ ಅಶ್ವತ್ಥಾಮನು ಅವಳೊಡನೆ ಯುದ್ಧ ಮಾಡುವಾಗ ದ್ರೌಪದಿ ಬಿಟ್ಟ ಬಾಣದಿಂದ ಹಣೆಮಣಿಯ ಹಾರಿ ಹೋಗುವದು. ತನ್ನ ಚಿರಂಜೀವಿ ಅವಸ್ಥೆಯಿಂದ ಕೆಳಗಿಳಿದು ಅಶ್ವತ್ಥಾಮ ಸೋಲುವನು. ಮತ್ತೆ ಪಶ್ಚಾತಾಪಕ್ಕೆ ಹಿಮಾಲಯಕ್ಕೆ ತಪಸ್ಸಿಗೆ ಹೋಗಲು ಕೃಷ್ಣನ ಆಶಿರ್ವಾದ ಪಡೆಯುತ್ತಾನೆ.

ದುರ್ಯೋಧನನ ರಕ್ತದಿಂದ ತಲೆಗೆ ಎಣ್ಣೆ ಹಚ್ಚಿದಂತೆ ಹಚ್ಚಿ ದ್ರೌಪದಿ ದುಶ್ಯಾಸನನ ಹಲ್ಲುಗಳಿದ ಹಣಿಗೆಯನ್ನು ಮಾಡಿಕೊಂಡು ತಲೆ ಬಾಚಿ ಕೊಳ್ಳುವಳು, ಮುಡಿಯನ್ನು ಕಟ್ಟಿಕೊಳ್ಳವಳು. ಉತ್ತರೆ ಗರ್ಭಿಣಿಯಾಗಿದ್ದವಳಿಗೆ ಹೆರಿಗೆಯಾಗುತ್ತದೆ. ಹುಟ್ಟಿದ ಮಗುವಿಗೆ ಪರಿಕ್ಷಿತ ನೆಂದು ಹೆಸರಿಟ್ಟು. ಧರ್ಮರಾಜನಿಗೆ ಪಟ್ಟಾಭಿಷೇಕ ನಡೆಯುವದು. ಕೃಷ್ಣನಿಗೆ ಪೂಜೆಗೊಂದಿಗೆ ನಾಟಕ ಮುಕ್ತಾಯವಾಗುತ್ತದೆ.

## ವೀರ ಸಿಂಧೂರ ಲಕ್ಷ್ಮಣ.

**ಸಾರಾಂಶ**

ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸಿದ ಅನೇಕ ವೀರರು ತಮ್ಮ ಹೆಸರುಗಳು ಅಜರಾಮರವಾಗಿ ಉಳಿಯಲಿ ಎಂಬ ಉದ್ದೇಶದಿಂದ ದುಡಿದವರಲ್ಲ! ಅವರಲ್ಲಿರುವ ಅಪಾರವಾದ ದೇಶಪ್ರೇಮ ಹಾಗೂ ನಮ್ಮ ನಾಡಿನಲ್ಲಿ ದಾಸ್ಯ ಮನೋಭಾವ ಹೊಗಲಾಡಿಸಿ ಸಮಾನತೆಯನ್ನು ತರುವ ಮಹೊನ್ನತ ದೃಷ್ಠಿಯನ್ನು ಹೊಂದಿದವರಾಗಿದ್ದಾರೆ. ಅಂತಹ ಐತಿಹಾಸಿಕ ಪ್ರಸಂಗಗಳು ಹಾಗೂ ಹೋರಾಡಿದ ವ್ಯಕ್ತಿಗಳು ಐತಿಹಾಸಿಕ ದಾಖಲೆಗಳಿಗೆ ಸಿಕ್ಕದೆ ಉಳಿದವರು ಸಾಕಷ್ಟಿದ್ದಾರೆ. ಅಂಥಹವರ ಅನೇಕ ಹೆಸರುಗಳು ಬಾಂಬೆ ಕರ್ನಾಟಕ ಪ್ರಾಂತಕ್ಕೆ ಸಂಬಂದಿಸಿದ ಜಮಖಂಡಿ, ಸಾಂಗಲಿ, ಜತ್ತ, ಈ ಸಂಸ್ಥಾನಗಳ ಸರಹದ್ದಿನಲ್ಲಿ ಓಡಾಡಿಕೊಂಡಿವೆ. ಸಮಾನತೆಯ ಸ್ವಾತಂತ್ರ್ಯಕ್ಕಾಗಿ ದುಡಿದ ಹೋರಾಟಗಾರ ವೀರ ಸಿಂಧೂರ ಲಕ್ಷ್ಮಣ.

'ಸಿಂಧೂರ' ಜತ್ತ ಜಿಲ್ಲೆಯಲ್ಲಿ ಬರುವ ಕರ್ನಾಟಕದ ಕಡೆಗೆ ಇರುವ ಕೊನೆಯ ಹಳ್ಳಿ. ಆ ಊರಿನಲ್ಲಿ ಕೃಷಿಯೇ ಮೂಲ ಉದ್ಯೋಗ, ಲಕ್ಷ್ಮಣ ಬಡ ಕುಟುಂಬದ ಸನದಿ ಸಾಬಣ್ಣನ ಮಗ, ತಾಯಿ ನರಸವ್ವ, ತಂಗಿ ದುಂಡವ್ವ, ಚಿಕ್ಕ ಕುಟುಂಬ, ವಾಲಿಕಾರನಾಗಿ ಚಾವಡಿಯ ಕೆಲಸ, ಊರಲ್ಲಿಯ ಹಪ್ತೆ ವಸೂಲಿ ಕೆಲಸಕ್ಕೆ ಊರ ಕುಲಕರ್ಣಿಯ ಕೈಯಲ್ಲಿ ಕೆಲಸಗಾರ. ಆಗ ಒಂದೆರಡು ವರ್ಷ ಬರಗಾಲ ಬಿದ್ದು ಜನರಲ್ಲಿ ಬಿರಾಡ (ಜಮೀನಿನ ಕರ) ತುಂಬಲು ಹಣ ಇರದ ಸಂದರ್ಭ ಬಂದೊದಗಿತ್ತು.

ಊರಿನ ಶ್ರೀಮಂತವರ್ಗದ ಭೀಮನಗೌಡ ಪೋಲಿಸ್ ಪಾಟೀಲ ಅತ್ಯಂತ ಕಠೋರ ಸ್ವಭಾವದ ವ್ಯಕ್ತಿಯಾಗಿದ್ದ ಊರಿನ ಮಾರುತಿ ದೇವರ ಗುಡಿಯಲ್ಲಿ ಲಕ್ಷ್ಮಣ ಹಾಗೂ ಗೌಡರ ನಡುವೆ ಚಕಮಕಿ ನಡೆದು ದೇವಸ್ಥಾನದಲ್ಲಿಯೇ ಲಕ್ಷ್ಮಣನಿಂದ ಗೌಡ ಹೊಡೆತ ತಿನ್ನುತ್ತಾನೆ ದೇವರ ಗುಡಿಗೆ ಬಂದಿದ್ದ ಲಕ್ಷ್ಮಣನ ತಾಯಿ ನರಸವ್ವ ಹಾಗೂ ತಂಗಿ ದುಂಡವ್ವ ಜಗಳವನ್ನು ಬಿಡಿಸಿಕೊಂಡು ಮನೆಗೆ ಹೊಗುತ್ತಾರೆ ಇದೆ ಸಿಟ್ಟಿನಿಂದ ಕೂಡಿದ ಗೌಡ ಲಕ್ಷ್ಮಣನ ಅಳಿಯಂದಿರಾದ ನರಸ್ಯಾ ಸಾಬ್ಯಾ ಗೋಪಾಲ್ಯಾ ಇವರನ್ನು ಕಲ್ಲಪ್ಪನ ಹೋಲದಲ್ಲಿ ತೆನೆ ಮುರಿದಿದ್ದಾರೆ ಎಂದು ಸುಳ್ಳ ನೆಪ ಹೂಡಿ ಚಾವಡಿ ಹಾಕಿರುತ್ತಾನೆ. ಆಗ ಲಕ್ಷ್ಮಣ ಜಿದ್ದಿನಿಂದ ಗೌಡ ಕುಲಕರ್ಣಿ ಎದುರಲ್ಲೆ ಚಾವಡಿಯನ್ನು

ಮುರಿದು ಅಳಿಯಂದಿರನ್ನು ಬಿಡಿಸಿಕೊಂಡು ಹೋಗುತ್ತಾನೆ ಈ ರೀತಿಯಾಗಿ ದ್ವೇಷ ಹಬ್ಬುತ್ತಾ ಹೋಗುತ್ತದೆ.

ಕುಲಕರ್ಣಿಯು ಲಕ್ಷ್ಮಣನ ತಂಗಿ ದುಂಡಿಯನ್ನು ಆಗಿನ ಅನಿಷ್ಠ ಪದ್ದತಿಯ ಪ್ರಕಾರ ದೇವರಿಗೆ ಬಿಡಲು ಮತ್ತು ಗೌಡನಿಗೆ ಅವಳ ಮೇಲೆ ಕಣ್ಣಿರುವದಾಗಿ ತಿಳಿಸುತ್ತಾನೆ ಈ ವಿಷಯ ತಿಳಿದ ಲಕ್ಷ್ಮಣ ಕುಲಕರ್ಣಿಯನ್ನು ಹಿಗ್ಗಾ ಮುಗ್ಗಾ ಹೊಡೆದು ಕಳುಹಿಸುತ್ತಾನೆ ಹೊಡೆಸಿಕೊಂಡ ಕುಲಕರ್ಣಿ ಗೌಡನಲ್ಲಿಗೆ ಬಂದು ತನ್ನ ಗತಿಯನ್ನು ವಿವರಿಸಿ ಗೌಡನಿಗೆ ಆಡಿದ ಮಾತುಗಳು ಮತ್ತಷ್ಟು ಖಾರವಾಗಿ ತಿಳಿಸಿ ಗೌಡನನ್ನು ಸಿಟ್ಟಿಗೇಳಿಸುವನು ಸಾಹುಕಾರನಾಗಿರುವ ಗೌಡ ಪೋಲಿಸ ಇಲಾಖೆಗೆ ತಿಳಿಸಿ ಅವರಿಂದ ಲಕ್ಷ್ಮಣನನ್ನು ಬಂದಿಸಲು ಸೂಚಿಸುತ್ತಾನೆ. ಗೌಡನನ್ನು ಹೊಡೆಯಲು ಲಕ್ಷ್ಮಣ ಸಜ್ಜಾಗಿದ್ದಾಗ, ಪೋಲಿಸ ಇನಸ್ಪೆಕ್ಟರ ಮೋಹನ ಕಲಾಲ ಎನ್ನುವನು ಬಂದು ಲಕ್ಷ್ಮಣನನ್ನು ಬಂಧಿಸುತ್ತಾನೆ. ಜೊತೆಗೆ ಇಬ್ಬರು ಪೋಲಿಸರು ೭.೧೧ ನಂ ಪಾಂಡು ಹಾಗೂ ಪಕುರುದ್ದೀನ ಹಾಗೂ ಇತರರು ಒಮ್ಮೆಲೆ ಮುತ್ತಿಗೆ ಹಾಕಿ ಹಿಡಿದು ಒಯ್ಯುತ್ತಾರೆ.

ತಾಯಿ ನರಸವ್ವ ಜೈಲಿನಲ್ಲಿರುವ ಮಗನ ಭೆಟ್ಟಿಗೆ ಹೋಗುತ್ತಾಳೆ ಪೋಲಿಸರು ಅವಳನ್ನು ಹೋರಗಡೆ ಕೂಡ್ರಿಸಿ ಎರಡು ದಿನ ಕಾಯಿಸುತ್ತಾರೆ ಮಗನಿಗೆ ಗುರುತಾಗುತ್ತದೆ. ನಂತರ ಪೋಲಿಸರನ್ನು ಪರಿಪರಿಯಾಗಿ ಕೇಳಿಕೊಂಡಾಗ ಲಕ್ಷ್ಮಣನ ಹತ್ತಿರ ಬಿಡುತ್ತಾರೆ ನಂತರ ಬಂದ ಕಟಕ ಇನಸ್ಪೆಕ್ಟರ ಆ ಮುದುಕಿಯನ್ನು ವಿನಾಕಾರಣ ಹಿಯಾಳಿಸಿ ಮಾತನಾಡಿ ಅವಳನ್ನು ಕೆಡವಿ ತಲೆ ಮೇಲೆ ಬೂಟುಕಾಲನ್ನು ಇಡುತ್ತಾನೆ. ಆಗ ಲಕ್ಷ್ಮಣ ಕಟ್ಟಿದ್ದ ಸರಪಳಿಯನ್ನು ಹರಿದು ಹಾಕಿ ಕಟಕ ಇನಸ್ಪೆಕ್ಟರನನ್ನು ಒದ್ದು ಅದೇ ಸರಪಳಿಯಿಂದ ಹೆಡಮುರಿದು ಕಟ್ಟಿ ಅವರ ಡ್ರೆಸ್ಸುಗಳನ್ನು ಕಸಿದುಕೊಂಡು ಹೋಗುತ್ತಾನೆ.

ಸಾಂಗಲಿಯ ಶೇಠ ಒಬ್ಬರ ಮನೆಗೆ ಪೋಲಿಸ ಅಧಿಕಾರಿಯ ಡ್ರೆಸ್ಸನಲ್ಲಿ ಹೋಗಿ ಅಲ್ಲಿರುವ ನಗ ನಾಣ್ಯಗಳನ್ನು ಲೂಟಿ ಮಾಡಿ ತಂದು ಬಡವರಿಗೆ ಹಂಚುವನು ಲಕ್ಷ್ಮಣ ಈ ರೀತಿಯಾಗಿ ಬಡವರಿಗೆ ಸಹಾಯ ಮಾಡುತ್ತಾ ಹೋರಟಾಗ ಊರಲ್ಲಿ ತಂಗಿ ಹಾಗೂ ತಾಯಿ ಇಬ್ಬರೇ ಇರುವ ಸಂದರ್ಭದಲ್ಲಿ ಗೌಡ ಆಳುಗಳನ್ನು ಕಳುಹಿಸಿ ದುಂಡಿಯನ್ನು ಎಳೆದು ತರಲು ತಿಳಿಸುತ್ತಾನೆ ಗೌಡನ ತೋಟದ ಮನೆಗೆ ಎಳೆತಂದು ಅವಳ ಶೀಲ ಕೆಡಿಸುತ್ತಾನೆ ಇತ್ತ ತಂಗಿಗೆ ಗಂಡನನ್ನು ಗುರ್ತಿಸಿ ಮದುವೆ ಸಿದ್ದತೆಗೆ ಲಕ್ಷ್ಮಣ

ತೊಡಗಿರುತ್ತಾನೆ ಊರಿನಿಂದ ಬರುವ ದಾರಿಯಲ್ಲೆ ದುಂಡವ್ವ ಎದುರಾಗುತ್ತಾಳೆ ಕೆದರಿದ ತಲೆಕೂದಲು ತೂರಾಡುವ ದೇಹ ನೋಡಿ ಗಾಬರಿಯಾಗುತ್ತಾನೆ ಸಮೀಪ ಬಂದಾಗ ಗೊತ್ತಾಗುತ್ತದೆ ದುಂಡವ್ವ ಎಂದು.

ಆಗಿರುವ ಅಚಾತರ್ಯ ಕೆಲಸವನ್ನು ನೆನೆದು ಲಕ್ಷ್ಮಣ ತುಂಬಾ ಕೋಪಗೊಳ್ಳುತ್ತಾನೆ ಆ ಗೌಡ ಆತನ ತಾಯಿಯ ಗರ್ಭದಲ್ಲಿದ್ದರೂ ಸರಿ ಆತನನ್ನು ತರಲು ಅಳಿಯಂದಿರಿಗೆ ಹೇಳಿದಾಗ ಊರಲ್ಲಿ ಹೊಕ್ಕು ಹುಡುಹುಡಕಿ ಎಳೆದು ತರುತ್ತಾನೆ ಗೌಡ ಪರಿಪರಿಯಾಗಿ ಬೇಡಿಕೊಂಡರೂ ಲಕ್ಷ್ಮಣನಿಗೆ ಕರುಣೆ ಇರುವುದಿಲ್ಲ ತಂಗಿಯ ಶೀಲಕೆಡಿಸಿದ ಗೌಡನನ್ನು ಕೊಡಲಿಯಿಂದ ರುಂಡ ಹಾರಿಸಲು ಕೈ ಎತ್ತಿದಾಗ ಸಂದರ್ಭಕ್ಕೆ ಸರಿಯಾಗಿ ನಿಡೋಣಿಯಿಂದ ದುಂಡಪ್ಪ ಎಂಬ ಇನ್ನೊಬ್ಬ ಬಂಟ ಇವರಲ್ಲಿ ಬಂದು ಇದು ನನ್ನ ಬೇಟೆ, ನನಗೆ ಇವನ ರುಂಡ ಬೇಕು ಎಂದಾಗ, ಅವನ ಕೈಯಿಂದ ಗೌಡನ ರುಂಡ ಹಾರಿಸುತ್ತಾನೆ.

ಈ ಸುದ್ದಿ ಸರಕಾರದ ಕಣ್ಣಿಗೆ ಬಿದ್ದು ಲಕ್ಷ್ಮಣನನ್ನು ಹಿಡಿಯಲು ಫರಮಾನು ಹೊರಡಿಸುತ್ತಾರೆ ಲಕ್ಷ್ಮಣನನ್ನು ಸಾಂಗಲಿ, ಜತ್ತ, ಜಮಖಂಡಿ, ಬೀಳಗಿ, ಮುಧೋಳ ವಿಭಾಗದಲ್ಲಿ ಆತನ ಬಗ್ಗೆ ಮಾಹಿತಿ ನೀಡುತ್ತಾರೆ.

ಮೊದಲೇ ಲಕ್ಷ್ಮಣನ ಮೇಲೆ ಸಿಟ್ಟು ಇಟ್ಟಿರುವ ಕಟಕ ಇನಸ್ಪೆಕ್ಟರ ಲಕ್ಷ್ಮಣ ಇದ್ದಲ್ಲಿಗೆ ಟ್ರಾನ್ಸಪರ ಮಾಡಿಸಿಕೊಂಡು ಹಿಡಿಯಲು ಜಮಖಂಡಿ ಸ್ಟೇಷನ್ನಿಗೆ ಬರುತ್ತಾನೆ. ಲಕ್ಷ್ಮಣನು ಸಿದ್ದಾಪೂರ, ಕಲ್ಹಳ್ಳಿ, ಮಧುರಖಂಡಿ ಗುಡ್ಡದಲ್ಲಿ ಇರುವ ಬಗ್ಗೆ ಮಾಹಿತಿ ತಿಳಿಯುತ್ತದೆ. ಅಲ್ಲಿಗೆ ಹಿಡಿಯಲು ಬಂದ ಕಟಕ್ ಇನಸ್ಪೆಕ್ಟರ ಗುಂಡು ಸಿಡಿಸಿ ಕೊಲ್ಲಲು ಪ್ರಯತ್ನಿಸುತ್ತಾನೆ ಅವನಲ್ಲಿರುವ ಮದ್ದು ಗಂಡು ಮುಗಿವ ತನಕ ಕಪ್ಪರ ಪಡಿಯವ್ವ ಎನ್ನುವಂಥ ಬಂಡೆಯ ಒಳಗಡೆ ಅವಿತು ಕುಳಿತು ಕೊಂಡಿರುವ ಲಕ್ಷ್ಮಣ ನಂತರ ಹೊರಗೆ ಬಂದು ಕಟಕ ಇನಸ್ಪೆಕ್ಟರನ ಜೊತೆಯಲ್ಲಿ ಕುಸ್ತಿ ನಡೆಯುತ್ತದೆ. ಹೋರಾಟದಲ್ಲಿ ನರಸ್ಯಾ ಬಂದು ಕಟಕನನ್ನು ಎಳೆದು ಒಗೆದು ಕೊಡಲಿಯಿಂದ ಒಂದೇ ಏಟಿಗೆ ರುಂಡ ಹಾರಿಸುತ್ತಾನೆ ಬೆಳಗಾಗುವದುರೊಳಗಾಗಿ ಜತ್ತ ಜೈಲಿನ ಬಾಗಿಲಿಗೆ ಕಟ್ಟಿ ಬರಲು ನರಸಪ್ಪ ರುಂಡ ತೆಗೆದುಕೊಂಡು ಹೋಗುತ್ತಾನೆ.

ಈ ಕೊಲೆಗಳಿಂದಾಗಿ ಲಕ್ಷ್ಮಣ ಹಾಗೂ ಅಳಿಯಂದಿರು ಊರುಕೇರಿಗಳನ್ನು ಬಿಟ್ಟು ಬೇರೆಕಡೆಗೆ ಅರಣ್ಯಗಳಲ್ಲಿ ವಾಸಿಸುವಂತಾಗುತ್ತದೆ. ಗೋಕಾಕ ತಾಲುಕಿನ ಅರಭಾವಿಯ ಮಠದ ಶ್ರೀಮ.ನಿಪ್ರ. ಇದುರದುಂಡೇಶ್ವರ ಅಪ್ಪಗಳ ಪಾದಕ್ಕೆ ನಮಸ್ಕರಿಸಲು ಹೋಗುತ್ತಾರೆ. ಪೂಜ್ಯರೆ ದರ್ಶನ ಪಡೆಯುತ್ತಾರೆ. ಅವರು ಒಂದು ಎಚ್ಚರಿಕೆ ಕೊಡುತ್ತಾರೆ. ಮಾರುತಿ ತಾಯತಕ್ಕೆ ಎಡೆ ತೋರಿಸದೆ ಊಟ ಮಾಡಬೇಡ ಎಂದು ಹಾಗೂ ಬಡವರ ಕಣ್ಣಿನಲ್ಲಿ ನೀರು ತರಿಸಬೇಡ ಎಂದು ಆಗಲಿ ಎಂದು ಅಶಿರ್ವಾದ ಪಡೆದು ಮುಂದೆ ಬೀಳಗಿ ತಾಲೂಕಿನ ತೆಗ್ಗಿಯ ವೆಂಕಟೆಪ್ಪ ನಾಯಕರ ಹತ್ತಿರ ಬರುತ್ತಾನೆ. ಲಕ್ಷ್ಮಣನ ಇಷ್ಟೆಲ್ಲ ಕೃತಿಗಳನ್ನು ಕೇಳಿದ ನಾಯಕರು ಲಕ್ಷ್ಮಣನನನ್ನು ಹೃದಯಕ್ಕೆ ಆಲಂಗಿಸಿಕೊಂಡು ಆತನ ಸಾಹಸಕ್ಕೆ ಮೆಚ್ಚಿಗೆ ವ್ಯಕ್ತಪಡಿಸಿ ಅವನಿಂದ ಬಡವರಿಗೆ ಅನುಕೂಲವಾಗುವದಾದರೆ ನನ್ನ ಸಹಕಾರವೂ ಇದೆ ಎಂದು ತಿಳಿಸಿ ತನ್ನ ಸ್ನೇಹದ ಕುರುಹಿಗಾಗಿ ಬಂಧೂಕನ್ನು ಉಡುಗೋರೆಯಾಗಿ ನೀಡುತ್ತಾನೆ. ತಂದೆ ಮಗನ ಬಾಂಧವ್ಯ ಕಂಡು ಬರುತ್ತದೆ.

ಬ್ರಿಟೀಷರಿಗೆ ಲಕ್ಷ್ಮಣನನ್ನು ಹಿಡಿಯುವದು ಸಾದ್ಯವಾಗದೇ ಹೋದಾಗ ತೆಗ್ಗಿ ವೆಂಕಟಪ್ಪ ನಾಯಕರನ್ನು ಕರೆತಂದು ಹೊಡೆದು ಬಡಿದು ಅವರನ್ನು ಒಪ್ಪಿಸುವ ಪ್ರಯತ್ನ ನಡೆದಾಗ ಅವರ ಆಳುಮಗ ತಮ್ಮ ನಾಯಕರ  ಈ ಸ್ಥಿತಿಯನ್ನು ಕಂಡು ನಾನು ಹಿಡಿದುಕೊಡುತ್ತೇನೆ ಎಂದು ಒಪ್ಪಿಕೊಳ್ಳುತ್ತಾನೆ. ಹಾಗೆಯೇ ಒಂದುದಿನ ಬ್ರಿಟೀಷರ ಅಧಿಕಾರಿಣಿ ಸೋನಿಯಾ ಎನ್ನುವ ಹೆಣ್ಣು ಮಗಳು ಲಕ್ಷ್ಮಣನನ್ನು ಕೊಲ್ಲಲು ಕಾಡಿಗೆ ಲಂಬಾಣಿ ಹುಡುಗಿಯಾಗಿ ವೇಷಧರಿಸಿಕೊಂಡು ಹೋಗುತ್ತಾಳೆ ಪಾಂಡು ಫಕರುದ್ದಿನ ಪೋಲಿಸರು ವಾಪಸ್ ಬರುತ್ತಾರೆ. ಹೆಂಗಸೊಬ್ಬಳೆ ಕಾಡಿನಲ್ಲಿ ಹೋಗುತ್ತಾಳೆ. ಲಕ್ಷ್ಮಣನ ಗುಂಪಿಗೆ ಸೇರುತ್ತಾಳೆ ರಾತ್ರಿ ಹೊತ್ತು ಗುಂಡು ಹಾರಿಸಿ ಕೊಲ್ಲಬೇಕೆಂದಾಗ ಎಲ್ಲರ ನಡುವೆ ಸಿಕ್ಕಿ ಬಿಳುತ್ತಾಳೆ ಆಗ ಲಕ್ಷ್ಮಣ ಅವಳಿಗೆ ಪಿಸ್ತೂಲು ಕೊಟ್ಟು ನನ್ನದೇನಾದರೂ ತಪ್ಪು ಇದ್ದರೆ ಕೊಂದುಬಿಡು ಎಂದು ಹೇಳಿದಾಗ ಅವಳೂ ಕೂಡಾ ಇವನ ಗುಂಪಿನಲ್ಲಿ ಸೇರಿಕೊಳ್ಳುತ್ತಾಳೆ.

ಸೋಮಾಲ್ಯ ಎನ್ನುವವನ ತೆಗ್ಗಿ ನಾಯಕನ ಆಳು ಊಟಕ್ಕೆಂದು ಲಕ್ಷ್ಮಣನ ಟೋಳಿ (ಗುಂಪು)ಗೆ ಹೇಳಿರುತ್ತಾನೆ. ರಾತ್ರಿ ಹೊತ್ತು ಯಾರು ಇಲ್ಲದ ಸಮಯಕ್ಕೆ ಊಟಕ್ಕೆ ಲಕ್ಷ್ಮಣ ಹಾಗೂ ಅಳಿಯಂದಿರು ಬರುತ್ತಾರೆ. ಊಟದ ಸಂದರ್ಭದಲ್ಲಿ ಲಕ್ಷ್ಮಣನನ್ನು ಒಂದು ಕಡೆಗೆ ಹಾಗೂ ಅಳಿಯಂದಿರನ್ನು ಇನ್ನೊಂದುಕಡೆಗೆ ಕೂಡ್ರಿಸಿ ಉಟಕ್ಕೆ

ಕೊಡುತ್ತಾನೆ. ಆಗ ಲಕ್ಷ್ಮಣ ಬರಿಮೈಯಲ್ಲಿ ಕುಳಿತಿರುತ್ತಾನೆ. ಕೊರಳಲ್ಲಿ ಮಾರುತಿ ತಾಯತ (ದಾರ) ಇರುವದಿಲ್ಲ ಊಟಕ್ಕೆ ಕುಳಿತಾಗ ಏಳಬಾರದು ಎಂದು ತಾಯಿ ಹೇಳಿರುತ್ತಾಳೆ ಹೀಗಾಗಿ ಕುಳಿತು ಬಿಡುತ್ತಾನೆ. ಸಮಯಕ್ಕೆ ಸರಿಯಾಗಿ ದುಡ್ಡಿನ ಆಸೆಗಾಗಿ ಸೋಮಲ್ಯ ಹೊರಗಿನಿಂದ ಲಕ್ಷ್ಮಣ ಎಡೆಗೆ ಗುರಿಯಿಟ್ಟು ಗುಂಡು ಹಾರಿಸಿಯೇ ಬಿಡುತ್ತಾನೆ. ಊಟಕ್ಕೆ ಕುಳಿತು ಎರಡು ತುತ್ತು ಅನ್ನ ತಿಂದ ಲಕ್ಷ್ಮಣ ಅನ್ನವನ್ನು ರಕ್ತವನ್ನು ಕಕ್ಕುತ್ತ ನೆಲದ ಮೇಲೆ ಉರಳಾಡುತ್ತ ತುಳಸೀಗೇರಿ ಹನಮಪ್ಪ ಅರಭಾವಿ ಅಜ್ಜನನ್ನು, ತನ್ನ ತಾಯಿಯನ್ನು ಕಪ್ಪರ ದಡಿಯವ್ವನನ್ನ ಸ್ಮರಿಸುತ್ತ ಸಾವನ್ನಪ್ಪುತ್ತಾನೆ. ಅವನು ಆಣೆಹಾಕಿದಾಗ ಉಳಿದವರು ಓಡಿ ಹೋಗುತ್ತಾರೆ.

ರಂಗಪ್ಪ, ರಾಮಚಂದ್ರಪ್ಪ ಪೂಜಾರ ಈ ನಾಟಕದಲ್ಲಿ ಪ್ರಮುಖ ಲಕ್ಷ್ಮಣ ಪಾತ್ರವನ್ನು ಜೀವತುಂಬಿದ ವ್ಯಕ್ತಿ ೨೦೧ ಪ್ರಯೋಗಗವನ್ನು ಉತ್ತಮವಾಗಿ ನಿರ್ವಹಿಸಿದ್ದಾರೆ. ಮಾರುತಿಗುಡಿಯ ಸನ್ನಿವೇಶ, ಚಾವಡಿ ಮುಂದಿನ ಸನ್ನವೇಶ, ಜೈಲಿನಲ್ಲಿ ಸೀನು ಕಪ್ಪರ ಪಡಿಯವ್ವನ ಗುಡಿ ಸೀನು. ಕಟಕ ಹಾಗೂ ಲಕ್ಷ್ಮಣ ಕುಸ್ತಿ ಹಾಗೂ ಸಾಯುವ ಮುನ್ನ ಅನ್ನ ಹಾಗೂ ರಕ್ತ ಕಕ್ಕುವ ಸೀನುಗಳು ಇಂದಿಗೂ ಜನರ ಉಮನದಲ್ಲಿ ಹಸಿರಾಗಿವೆ. ಇನ್ನೂಳಿದ ಗೌಡ, ಕುಲಕರ್ಣಿ ಕಟಕ ಹಾಗೂ ನರಸ್ಯಾ, ಗೋಪ್ಯಾ ಸಾಬ್ಯಾ, ಪೋಲಿಸರ ಹಾಸ್ಯ ಎಲ್ಲರ ಪಾತ್ರಗಳೂ ಮನಮುಟ್ಟುವಂಥದು.

## ೪.೨ ಸಿದ್ದಗಿರಿ ಸ್ವಾಮಿಗಳ ನಂತರ ಕಾಲದ ಪಾತ್ರದಾರಿಗಳು
(ಸಂಪೂರ್ಣ ಹೇಮರಡ್ಡಿ ಮಲ್ಲಮ್ಮ)

**ಪುರುಷ ವರ್ಗದವರು**

*ಬರಮರಡ್ಡಿ – ಈರಯ್ಯ ಹಿಡಕಲ್

ಮಲ್ಲಿಕಾರ್ಜುನ –ಸದಾಶಿವಯ್ಯ ಹಿಡಕಲ್

ಹೇಮರಡ್ಡಿ –ಭೀಮಪ್ಪಾ ಮದರಡ್ಡಿ

**ಸ್ತ್ರೀ ವರ್ಗದವರು**

ಮಲ್ಲಮ್ಮ –ಶ್ರೀ ಮಲ್ಲಯ್ಯ ಹಿಡಕಲ್

ಅತ್ತೆ –ಸಿದ್ದಗಿರಯ್ಯ – ಹುಲ್ಯಾಳ

ಬಸಮ್ಮಮ್ಮ–ಗುಂಡು ಗುರೋವ

ನಾಗಮ್ಮ –ಸಿದಮಲ್ಲಪ್ಪ ಪರಪ್ಪನವರ

**ಸಂಗೀತ ಬಳಗದವರು**

ಹಾರ್ಮೋನಿಯಂ – ಸಿದ್ದಗಿರಿ ಸ್ವಾಮಿಗಳ ಹಿರಿಯ ಮಗ ಶ್ರೀ ಬಸವಪ್ರಬಯ್ಯ

ತಬಲಾ – ದೇವೆಂದ್ರಪ್ಪಾ ಹುಲ್ಯಾಳ, ಸುರೇಶ ಬಡಿಗೇರ

### ಕುರುಕ್ಷೇತ್ರ ನಾಟಕದ ಪಾತ್ರದಾರಿಗಳು

**ಪುರುಷ ವರ್ಗದವರು**

ಪಾಂಡವರು

ಶ್ರೀ ಕೃಷ್ಣನ ಪಾತ್ರ –ಹಣಮಂತ ಪತ್ತಾರ

ಅರ್ಜುನ – ಅರ್ಜುನ ತಳವಾರ

ಭೀಮ –ಬಸವಂತ ಜಕ್ಕಣ್ಣವರ

ನಕುಲ – ಪಾಡು ಗೋರವ

ಸಹದೇವ –ಲಕ್ಕಪ್ಪ ಗಸ್ತಿ

**ಕೌರವರು**

ಶಕುನಿ–ರೇವಪ್ಪ ಸಿದರಡ್ಡಿ

ದುರ್ಯೋದನ–ರೇವಪ್ಪ ಖಿಳೇಗಾಂವಿ

ದುಶ್ಯಾಸನ– ಸತ್ಯಪ್ಪ ಗೋರವ

**ಸ್ತ್ರೀ ವರ್ಗದವರು**

ದ್ರೌಪದಿ – ತಿಮ್ಮಣ್ಣ ಪೂಜಾರ

ಸುಭದ್ರಾ – ಸಂಗಪ್ಪ ಪೆಟ್ಲೂರ

ದುಸ್ಸಿಲಾ – ಕೆಂಪಣ್ಣ ಮದರಡ್ಡಿ

ಕರ್ಣ – ಈಶ್ವರ ಮಾಳೇದ

ಜಯದ್ರತ–ಶಂಭುಲಿಂಗ ಸಿದರಡ್ಡಿ

ಪರಶುರಾಮ –

ಅಭಿಮನ್ಯು –

ಮಾರುತಿ –



ಹಣಮಂತ ನಂದಿ

## ರಕ್ತರಾತ್ರಿ ನಾಟಕದ ನಟ ವರ್ಗ

**ಪಾಂಡವರು**

**ಪುರುಷ ವರ್ಗದವರು**

ಕೃಷ್ಣ – ಚಿದಾನಂದ ಬಡಿಗೇರ

ಧರ್ಮರಾಜ – ಗಂಗಪ್ಪ ತಳವಾರ

ಅರ್ಜುನ – ಉಮ್ಮಣ್ಣ ಸಿದರಡ್ಡಿ

ಭೀಮ – ನಿಜಗುಣ ಕಸರಡ್ಡಿ ಬಿಜಾಪೂರ

**ಸ್ತ್ರೀ ವರ್ಗದವರು**

ದ್ರೌಪದಿ – ಪುಷ್ಪಮಾಲಾ ಅನ್ನಿಗೇರಿ

ಉತ್ತರಾ –ನಿರ್ಮಲಾ ದಾವಣಗೇರಿ

ಬಾನುಮತಿ – ಪರಿಮಳಾ ಹುಬ್ಬಳಿ

ಮದುಹೌಂಸಿ – ಶಕುಂತಲಾ

**ಕೌರವರು**

ಶಕುನಿ – ಹುಚ್ಚಪ್ಪ ರಡಿವಾಲ

ದುರ್ಯೋದನ – ಅವಣ್ಣಪ್ಪ ಜಂಗಪ್ಪನವರ

ಅಶ್ವತ್ಥಾಮ – ಉಮೇಶ ಸಿದರಡ್ಡಿ

ಕರ್ಣ – ಕಲ್ಲಪ್ಪ ಗಡ್ಡೇಕರ

ದುಶ್ಯಾಸನ – ಸತ್ಯಪ್ಪ ಹುಗಾರ

ನವಲಿಪಕ್ಕ – ಶಶಿಕಾಂತ ಸಿದರಡ್ಡಿ

ಶಂಕದತ್ತ – ಗೊಳಪ್ಪ ಖಿಳೇಗಾಂವಿ

ಕಲಿದೇವ – ರಮೇಶ ಖಿಳೇಗಾಂವಿ

## ವೀರ ಸಂಗೊಳ್ಳಿ ರಾಯಣ್ಣ ನಾಟಕದ ನಟ ವರ್ಗ

**ಪುರುಷ ವರ್ಗದವರು**

ರಾಯಣ್ಣ – ಉಮೇಶ ಸಿದರಡ್ಡಿ

ಚನ್ನ ಬಸಣ್ಣ – ಮಲ್ಲಪ್ಪ ರಾಚಣ್ಣವರ

ಗಜವೀರ –ವೆಂಕಪ್ಪ ಕಡಿವಾಲ

ಕುಲಕರ್ಣಿ – ಸಂಗಯ್ಯ ಮಠಪತಿ

ಮಾಂಬ್ಲೇದಾರ – ನಿಜಗುಣಿ ಕಸರಡ್ಡಿ

ಚಾಪ್ಲೇನ – ಶಂಕರ ನಂದಿ

ಕ್ಯಾಪ್ಟನ್ – ಶ್ರೀಶೈಲ ತಳವಾರ

ದುಂಡಪ್ಪ –ಹುಚ್ಚಪ್ಪ ಕಸರಡ್ಡೊ

ಲಿಂಗನಗೌಡ – ಶ್ರೀಶೈಲ ಸಿದರಡ್ಡಿ

**ಸ್ತ್ರೀ ವರ್ಗದವರು**

ರಾಣಿ ಚನ್ನಮ್ಮ –ಉಮ್ಮಣ್ಣ ಸಿದರಡ್ಡಿ

ಶಾಂತಾ – ಶಶಿಕಾಂತ ಸಿದರಡ್ಡಿ

ಮಾಯ್ಕಾ –ಗೂಳಪ್ಪ ಖಿಳೇಗಾಂವಿ

## ವೀರ ಸಿಂದೂರ ಲಕ್ಷ್ಮಣ ನಾಟಕದಲ್ಲಿನ ನಟ ವರ್ಗ

**ಪುರುಷ ವರ್ಗದವರು**

ಲಕ್ಷ್ಮಣ – ರಂಗಪ್ಪ ರಾ. ಪೂಜಾರ

ನರಸ್ಯಾ –ಹಣಮಂತ ರಾ. ತುಳಸಿಗೇರಿ

ಸಾಬ್ಯಾ – ಮನೋಹರ ಮಾಳೇದ

ಭೀಮನಗೌಡ –ಸಿದ್ದಪ್ಪ ಮಾಳೇದ

ಕಬಾಕ್ ಇನ್ಸಪೇಕ್ಟರ್ – ಸಂಬುಲಿಂಗ ಸಿದರಡ್ಡಿ

ನಂ –7– ಪಾಂಡು–ಕೆಂಪಣ್ಣ ಮುದರಡ್ಡಿ

ಕುಲಕರ್ಣಿ – ಮಲ್ಲಪ್ಪ ಶಂಕರಯ್ಯ ಕಲಕತ್ತಿಮಠ

ಗಾರ್ಮನ –ಬಸಪ್ಪ ಶಿ. ಮಾಳೇದ

ದುಂಡ್ಯಾ – ಗುರಪ್ಪ ರಾ. ಇಂಗಳಗಿ

ವೆಂಕಟಪ್ಪನಾಯಕ – ಉಮೇಶ ದು. ಸಿದರಡ್ಡಿ

ಪೂಜಾರಿ – ಶ್ರೀಶೈಲ ಮಾಳೇದ

**ಸ್ತ್ರೀ ವರ್ಗದವರು**

ನರಸವ್ವ – ಸುಮಿತ್ರಾ ಮರೇಗುದ್ದಿ

ದುಂಡವ್ವ – ರಂಜನಾ ಮರೆಗುದ್ದಿ

ಸೋನಿಯಾ – ಪ್ರೇಮಾ ಮರೇಗುದ್ದಿ

---

ಈ ಎಲ್ಲಾ ಕಥಾ ಸಾರಾಂಶಗಳನ್ನು ಪಾತ್ರದಾರಿಗಳಿಂದ ಹಾಗೂ ಧ್ವನಿಸುರುಳಿಗಳ ಮೂಲಕ ಮಾಹಿತಿ ಪಡೆದು ಸಂಗ್ರಹಿಲಾಯಿತು.

## ಪ್ರಸ್ತುತದಲ್ಲಿ ಮಧುರಖಂಡಿಯ ರಂಗ ಪರಂಪರೆ

ಈ ರಂಗ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗಬೇಕೆಂದು ಮನಗಂಡ ಸಿದ್ದಗಿರಿ ಸ್ವಾಮಿಗಳ ಮೊಮ್ಮಕ್ಕಳಿಂದ ನಾಟಕ ಈಗಲೂ ನಡೆಯುತ್ತಲೇ ಇದೆ.

ಪ್ರಸ್ತುತದಲ್ಲಿ ಕಂಡು ಬರುವ ಯುವ ಪೀಳಿಗೆಯ ಪಾತ್ರದಾರಿಗಳು ಈ ರೀತಿಯಿಂದ ಕಂಡುಬರುತ್ತವೆ.

### ಹೇಮರಡ್ಡಿ ಮಲ್ಲಮ್ಮ ನಾಟಕದ ಪಾತ್ರದಾರಿಗಳು

| ಪುರುಷ ವರ್ಗದ ಪಾತ್ರಗಳು | |
|---|---|
| ಮಲ್ಲಿಕಾರ್ಜುನ – ವೇಮಣ್ಣ – ಸೋಮರಡ್ಡಿ – | ಮಹಾಂತಯ್ಯ ಮ. ಕಂಬಿ |
| ಹೇಮರಡ್ಡಿ | ಬಸಯ್ಯ ಬ. ಬಾಳಿಗೇರ |
| ಭರಮರಡ್ಡಿ | ಚಿದಾನಂದ ದು. ಪರಪ್ಪನವರ |
| ಶೆಟ್ಟಿ | ಶಿವಪುತ್ರಯ್ಯ ಹಿಡಕಲ್ |

| ಸ್ತ್ರೀ ವರ್ಗದ ಪಾತ್ರಗಳು | |
|---|---|
| ಮಲ್ಲಮ್ಮ | ಬಸಲಿಂಗಯ್ಯ ಮ. ಹಿಡಕಲ್ |
| ಪದ್ಮಮ್ಮ, ಶಾಂತಮ್ಮ | ಶಶಿಕಾಂತ ಭೀ. ಶಿದರಡ್ಡಿ |
| ನಾಗಮ್ಮ, ಗುರುಲಿಂಗಮ್ಮ | ಸವಂತ ಹ. ತುಳಸಿಗೇರಿ |
| ಬಸಮ್ಮ, ವೇಶ್ಯೆ | ಸದಾಶಿವಯ್ಯ ಮ ಶಿರೋಳ |

**ಸಂಗೀತ ಬಳಗದವರು**

ಹಾರ್ಮೋನಿಯಂ – ಶ್ರೀ ಮಲ್ಲಯ್ಯ ಚ. ಮಠಪತಿ

ಶ್ರೀ ಶ್ರೀಶೈಲ ಸಿ. ಮಠಪತಿ

ತಬಲಾ – ಶ್ರೀ ಶಂಕ್ರಯ್ಯ ಮ. ಹಿಡಕಲ್

ಶ್ರೀ ಶಂಕ್ರಯ್ಯ ಸಿ. ಮಠಪತಿ

ತಾಳವಾದಕರು – ಕಲ್ಲಯ್ಯ ಸಿ. ಮಠಪತಿ

ಈ ನಾಟಕವನ್ನು ಕಲಾವಿದರು ಮಧುರುಖಂಡಿಯಲ್ಲಿ ಅಷ್ಟೇ ಅಲ್ಲದೆ ನೆರೆ ರಾಜ್ಯಗಳಾದ ಮಹಾರಾಷ್ಟ್ರ, ಆಂದ್ರಾ, ಗೋವಾ, ಮುಂಬೈ ರಾಜ್ಯಗಳಲ್ಲಿ ಅಭಿನಯಿಸಿ ಪ್ರಖ್ಯಾತರಾಗಿದ್ದಾರೆ.

ಶ್ರೀ ಸಿದ್ದಗಿರಿ ಸ್ವಾಮಿಗಳ ನಂತರದ ಕಾಲದಲ್ಲಿ ಇಂದಿಗೂ ನಡಿಯುತ್ತಿರುವ ಮಧುರಖಂಡಿಯ ನಾಟಕಗಳು ೧) **ಸಂಪೂರ್ಣ ಹೇಮರಡ್ಡಿ ಮಲ್ಲಮ್ಮ** ೨) **ವೀರ ಸಂಗೊಳ್ಳಿ ರಾಯಣ್ಣ** ೩) **ರಕ್ತ ರಾತ್ರಿ** ೪) **ವೀರ ಸಿಂಧೂರ ಲಕ್ಷ್ಮಣ.**

ಈ ನಾಟಕಗಳಲ್ಲಿ ಸಿದ್ದಗಿರಿ ಸ್ವಾಮಿಗಳ ವಂಶಸ್ಥರಲ್ಲದೆ ಊರಿನ ಇತರ ಜನರು ಸೇರಿದ್ದಾರೆಂಬುದು ಮಧುರಖಂಡಿಯ ವೈಶಿಷ್ಟ್ಯತೆಯಾಗಿದೆ.

ಹೀಗೆ ಶ್ರೀ ಸಿದ್ದಗಿರಿ ಸ್ವಾಮಿಗಳು ಉತ್ತರ ಕರ್ನಾಟದ ರಂಗ ಭೂಮಿಗೆ ಜೀವಕಳೆ ತುಂಬಿ ಮಧುರಖಂಡಿಯಲ್ಲಿ ರಂಗ ಪರಂಪರೆಯೊಂದನ್ನು ಉಳಿಸಿಬೆಳೆಯಿಸಿದರು. ಶ್ರೀಯುತರು ೧೬-೦೨-೨೦೦೮ ರಂದು ಬದುಕಿಗೆ ವಿದಾಯ ಹೇಳಿದರು.

---

ಈ ಎಲ್ಲ ಪಾತ್ರದಾರಿಗಳ ಬಗ್ಗೆ ಮತ್ತು ಕಥೆಯ ಸಾರಾಂಶಗಳನ್ನು ಕಲಾವಿದರನ್ನು ಕೇಳಿ ಮಾಹಿತಿ ಸಂಗ್ರಹಿಸಲಾಗಿದೆ.




ಶ್ರೀ ಸಿದ್ಧಗಿರಿ ಸ್ವಾಮಿಗಳ ಸಮಾಧಿ

## ೪.೩ ನಾಟಕ ಕ್ಷೇತ್ರಕ್ಕೆ ಮಧುರಖಂಡಿಯ ಕೊಡುಗೆ

ಕರ್ನಾಟಕದಲ್ಲಿ ಬಾಗಲಕೋಟ ಜಿಲ್ಲೆಯ ಐತಿಹಾಸಕವಾಗಿ, ಧಾರ್ಮಿಕವಾಗಿ ವಿಶಿಷ್ಟ ಸ್ಥಾನ ಪಡೆದಿದೆ. ಈ ಜಿಲ್ಲೆಯ ಜಮಖಂಡಿ ತಾಲೂಕಿನ ಮಧುರಖಂಡಿ ಗ್ರಾಮವು ಇನ್ನೊಂದು ದೃಷ್ಟಿಯಲ್ಲಿ ಬಹಳ ಮಹತ್ವವನ್ನು ಪಡೆದಿದೆ.

ಮಧುರಖಂಡಿಯು ಕಲೆಗಳ ಬೀಡು, ಕಲಾಕಾರರ, ಸಂಗೀತಗಾರರ, ನಟರ ತವರು ಮನೆ ಎಂದು ಹೇಳಬಹುದು. ಇಲ್ಲಿ ಯಾರನ್ನೇ ಕೇಳಿದರೂ ಸಂಗೀತ ಜ್ಞಾನ ಇಲ್ಲವೆನ್ನುವವರೇ ಇಲ್ಲ. ಅಂದರೆ ಒಂದೊಂದು ಊರಿಗೆ ಒಂದೊಂದು ತನ್ನದೇಯಾದ ವಿಶೇಷಗಳಿರುತ್ತವೆ. ಆದರೆ ಜಮಖಂಡಿ ತಾಲೂಕಿನ ನೆರೆ ಗ್ರಾಮಗಳ ವಿಶೇಷವೆಂದರೆ ಅವರು ಆಡುವ ನಾಟಕಗಳು ಆಯಾ ಗ್ರಾಮಗಳಿಗೆ ವಿಶೇಷಣಗಳಾಗಿರುತ್ತವೆ. ಉದಾಹರಣೆಗೆ ಮಧುರಖಂಡಿಯ ಮಲ್ಲಮ್ಮ, ಹುನ್ನೂರಿನ ದೀಪಾವಳಿ, ಆಸಂಗಿಯ ಲವ-ಕುಶ, ಜಮಖಂಡಿಯ ಪಾರಿಜಾತ, ನಾವಲಗಿ ಸಂಗ್ಯಾಬಾಳ್ಯಾ, ಬೆಳಗಲಿಯ ಹಳ್ಳಿಯಿಂದ ದಿಲ್ಲಿವರೆಗೆ, ಹೀಗೆ ಕೆಲವೊಮ್ಮೆ ನಾಟಕದಲ್ಲಿ ಪಾತ್ರಧಾರಿಗಳ ಪ್ರಭಾವದಿಂದ ಆ ನಾಟಕದ ಹೆಸರೇ ಬದಲಾವಣೆಹೊಂದುವುದನ್ನು ಕೂಡಾ ನಾವು ಗಮನಿಸಬಹುದು. ಉದಾ : ಸಂಪೂರ್ಣ ಹೇಮರಡ್ಡಿ ಮಲ್ಲಮ್ಮನ ಪಾತ್ರದಲ್ಲಿ ಶ್ರೀ ಸಿದ್ದಗಿರಿ ಸ್ವಾಮಿಗಳು, ದೀಪಾವಳಿಗೆ ಗ್ಯಾರಂಟಿ ಪಾತ್ರ, ಹಳ್ಳಿಯಿಂದ ದಿಲ್ಲಿಯವರೆಗೆ ಕುತುಬ್ಯಾನ ಆಟ, ಶ್ರೀ ಕೃಷ್ಣ ಪಾರಿಜಾತಕ್ಕೆ ಅಪ್ಪಾಲಾಲನ ಆಟ, ಹೀಗೆ ಪ್ರೇಕ್ಷಕರು ಆಯಾ ಪಾತ್ರಧಾರಿಗಳ ಕಲೆಗಳನ್ನು ಗುರುತಿಸಿ ಆಯಾ ನಾಟಕಗಳನ್ನು ಪ್ರಖ್ಯಾತಿಗೆ ತಂದರು.

ಮಧುರಖಂಡಿಯಲ್ಲಿ ಹಾಗೆ ನೋಡಿದರೆ ಮನೆಗೊಬ್ಬ ರಂಗಕಲಾವಿದ ಸಿಕ್ಕುತ್ತಾನೆ. ಇದಕ್ಕೆ ನಿದರ್ಶನವೆಂದರೆ ಶ್ರೀ ಮಲ್ಲಿಕಾರ್ಜುನ ಪ್ರಾಸಾದಿಕ ನಾಟ್ಯ ಸಂಘ, ಮಧುರಖಂಡಿ, ಹಾಗೂ ಶ್ರೀ ಮಲ್ಲಿಕಾರ್ಜುನ ನಾಟ್ಯ ಸಂಘ, ಜಮಖಂಡಿ. ಸೋಮಲಿಂಗೇಶ್ವರ ನಾಟ್ಯ ಸಂಘ ಮಧುರಖಂಡಿ, ಇನ್ನೂ ಹಲವಾರು ನಾಟಕ ಕಂಪನಿಗಳ್ನು ಸ್ಥಾಪಿಸಿ ಪಾತ್ರಾಭಿನಯದಲ್ಲಿ ಹೆಸರು ಗಳಿಸಿದ್ದಾರೆ.

ಮಧುರಖಂಡಿಯ ಜನರು ನಾಟಕರಂಗಕ್ಕೆ ಒಂದೇ ಪ್ರಾದಾನ್ಯತೆ ಕೊಡದೆ ಭಜನಾ ಪದಗಳನ್ನು ಹಾಡುವುದು ಜೊತೆಗೆ ವಾಧ್ಯಗಳನ್ನು ವಿಶಿಷ್ಟ ರೀತಿಯಿಂದ ಬಾರಿಸುವ ಕಲೆಯನ್ನು ಹೊಂದಿದ್ದರು, ತಾಳಬಾರಿಸುವ ಚರ್ಮವಾದ್ಯ ಬಾರಿಸುವ ಕಲೆ, ಮತ್ತು ಹಾರ್ಮೋನಿಯಂ ಬಾರಿಸುವುದು, ತಬಲಾಬಾರಿಸುವುದು, ಹೀಗೆ ವಾದ್ಯಬಾರಿಸುವುದರೊಂದಿಗೆ ಜನರ ಮನವನ್ನು ಗೆಲ್ಲುತ್ತಿದ್ದರು. ಇವರ ರಾಗ ಹಾಗೂ ತಾಳಗಳಿಂದ ಕೂಡಿ ಲಯಬದ್ದವಾಗಿ ಬಾರಿಸುವುದನ್ನು ಕಂಡು ಕುಂತ ಪ್ರೇಕ್ಷಕರು ಎದ್ದು ಲಯತುಂಬಿ ಕುಣಿಯಲು ಪ್ರಾರಂಭಿಸುತ್ತಿದ್ದರು. ಇಂಥ ಹಲವಾರು ನಿದರ್ಶನಗಳು ಕಂಡುಬರುತ್ತವೆ. ಒಮ್ಮೆ ಹುಲ್ಯಾಳದಲ್ಲಿ ಶ್ರೀ ಶಂಭುಲಿಂಗ ಶಿವಾಚಾರ್ಯರ ಯೋಗಾಶ್ರಮ ಮಠದಲ್ಲಿ ಪ್ರತಿ ವರ್ಷದ ಪದ್ದತಿಯಂತೆ ಭಾರತ ಹುಣ್ಣಿಮೆಯದಿನ ನಡೆಯುವ ಪಾರಮಾರ್ಥಿಕ ಮಹೊತ್ಸವದಲ್ಲಿ ಶ್ರೀ ಸಿದ್ದಗಿರಿ ಸ್ವಾಮಿಗಳ ಭಜನಾ ಕಂಪನಿಯು ತಮ್ಮ ಪ್ರದರ್ಶನ ವ್ಯಕ್ತಪಡಿಸುವ ಸಮಯದಲ್ಲಿ ವಾದ್ಯದೊಂದಿಗೆ ರಾಗಬದ್ದವಾಗಿ ಹಾಡುವಾಗ ಕುಳಿತು ಕೇಳುತ್ತಿದ್ದ ರಂಗಪ್ಪ ಎಂಬ ಪ್ರೇಕ್ಷಕ ಲಯ ತುಂಬಿ ಎದ್ದುನಿಂತು ತಲೆಯ ಮೇಲಿರುವ ರುಮಾಲ ಹಾರಿಸಿ ಕುಣಿಯಲು ಪ್ರಾರಂಭಿಸಿದ ಸಂಗತಿ ಕೇಳಿದರೆ ಅವರು ಭಜನಾ ಪದ ಅನ್ನುವ ಶೈಲಿ ಅರಿವಾಗುತ್ತದೆ. ಈ ಎಲ್ಲ ವಿಷಯವನ್ನು ಆ ಗ್ರಾಮಲ್ಲಿ ಸಂದರ್ಶಿಸಿದಾಗ ಅಲ್ಲಿಯ ಪ್ರೇಕ್ಷಕರು ಪ್ರಸ್ತುತ ಪಡಿಸಿದ ವಿವರಗಳು ಇಲ್ಲಿವೆ.

---

ಮಧುರಖಂಡಿಯ ಹಾಗೂ ನೆರೆ ಗ್ರಾಮಗಳ ಕಲಾಭಿಮಾನಿಗಳ ಸಂದರ್ಶನದಿಂದ ಮಾಹಿತಿ ಪಡೆಯಲಾಯಿತು.

ಅಧ್ಯಾಯ – ೫

# ಸಮಾರೋಪ

ಈ ಪ್ರಬಂಧದ ಉದ್ದೇಶವು ಉಧುರಖಂಡಿ ರಂಗ ಪರಂಪರೆಯ ಅಧ್ಯಯನವಾಗಿದೆ.

ಪ್ರಸ್ತುತದಲ್ಲಿ ಕಂಡು ಬರುವ ರಂಗ ಪರಂಪರೆಯು ಬಹಳ ವಿಶಾಲವಾದುದು, ಜಮಖಂಡಿ

ತಾಲೂಕಿನ ಮಧುರಖಂಡಿ ಗ್ರಾಮದ ರಂಗ ಪರಂಪರೆಯ ಅಧ್ಯಯನ ಮೊದಲ ಪ್ರಯತ್ನವಿದು.

ಈ ಅಧ್ಯಯನಕ್ಕೆ ಹಿನ್ನೆಲೆಯಾಗಿ ಕರ್ನಾಟಕ ರಂಗ ಪರಂಪರೆಯನ್ನು ಸ್ಥೂಲವಾಗಿ ಉಲ್ಲೇಖಿಸಿದ್ದೇನೆ. ನಂತರ ಜಮಖಂಡಿ ರಂಗ ಪರಂಪರೆಯ ಪರಿಚಯದೊಂದಿಗೆ ಮಧುರಖಂಡಿಯ ರಂಗ ಪರಂಪರೆಯನ್ನು ವಿಸ್ತಾರವಾಗಿ ಅಧ್ಯಯನಮಾಡಿದ್ದೇನೆ.

ಈ ಸಂದರ್ಭದಲ್ಲಿ ಮಧುರಖಂಡಿಯ ರಂಗ ಪರಂಪರೆಯು ಶ್ರೀ ಸಿದ್ಧಗಿರಿ ಸ್ವಾಮಿಗಳ ರಂಗ ಪ್ರವೇಶದೊಂದಿಗೆ ಪ್ರಾರಂಭವಾಗುವುದನ್ನು ಗುರುತಿಸಿದ್ದೇನೆ. ಶ್ರೀ ಸಿದ್ಧಗಿರಿ ಸ್ವಾಮಿಗಳ ಅಭಿನಯಿಸಿರುವ ನಾಟಕಗಳ ಪರಿಚಯವನ್ನು ಮಾಡಿ ಅದರ ಜೊತೆಗೆ ಸಿದ್ಧಗಿರಿ ಸ್ವಾಮಿಗಳ ಅಭಿನಯ ವೈಶಿಷ್ಟ್ಯತೆಯನ್ನು ಗುರುತಿಸಲು ಪ್ರಯತ್ನಿಸಿದ್ದೇನೆ.

ಮೊದಲು ಮಧುರಖಂಡಿಯಲ್ಲಿ ರಂಗ ಕಲೆಯು ಬೆಳೆಯ ಬೇಕಾದರೆ ಶ್ರೀ ಶಂಕರೆಪ್ಪ ಸಿದರಡ್ಡಿಯವರೇ ಕಾರಣ. ಇವರು ಅಕ್ಷರ ಸಂಸ್ಕೃತಿಯಿಂದ ದೂರ ವಿದ್ದರೂ ಸಹ ನಾಟಕ ಕಲಿಸುವ ಕಲೆ ಹೊಂದಿದ್ದರು. ಇವರು ಶ್ರೀ ಸಿದ್ಧಗಿರಿ ಸ್ವಾಮಿಗಳಲ್ಲಿ ಕಂಡುಬರುವ ನಾಟಕಾಸಕ್ತಿ ಗುರುತಿಸಿದರು. ಇವನೇ ಅಭಿನಯಕ್ಕೆ ಸರಿಯಾದ ವ್ಯಕ್ತಿಯೆಂದು ಮನವರಿಕೆ ಮಾಡಿಕೊಂಡು ತಮ್ಮ ಕಲಿಸುವ ಪ್ರಯತ್ನ ಮುಂದುವರೆಸಿಕೊಂಡು ಹೋದರು.

ಇವರ ಪ್ರಥಮ ನಾಟಕದ ಪ್ರಯೋಗ ಶ್ರೀ ಕೃಷ್ಣ ಪಾರಿಜಾತ ನಾಟಕ ಮಾಡಿದರು, ಇಲ್ಲಿಯ ಕಲಾವಿದರ ಒಂದು ವೈಶಿಷ್ಟ್ಯವೆಂದರೆ ಸ್ತ್ರೀಯರ ಪಾತ್ರವನ್ನು ಪುರುಷರೇ ಮಾಡುತ್ತಿದ್ದರು. ಒಂದು ಹೆಣ್ಣಿನಲ್ಲಿರುವ ನಯ ನಾಜೂಕು ಹಾವ-ಭಾವ, ಶೈಲಿ ಅಪಾರವಾಗಿ ಕಂಡು ಬರುತ್ತಿದ್ದವು. ಈ ಎಲ್ಲವುಗಳನ್ನು ಮೇಳಯಿಸಿಕೊಂಡಿರುವ ಶ್ರೀ ಸಿದ್ಧಗಿರಿ ಸ್ವಾಮಿಗಳು ಸ್ತ್ರೀ ಪಾತ್ರಕ್ಕೆ ಹೇಳಿ ಮಾಡಿಸಿದಂತಹ ದೇಹ ದಾರ್ಡ್ಯತೆಹೊಂದಿದ್ದರು, ಇವರು ಪ್ರಥಮ ಪ್ರಯೋಗ ನಾಟಕದಲ್ಲಿ ಪ್ರಮುಖ ಸ್ತ್ರೀ ಪಾತ್ರಗಳಾದ ಸತ್ಯಭಾಮೆ, ಕೊರವಂಜಿ ಪಾತ್ರದಲ್ಲಿ ಅದ್ದೂರಿಯಾಗಿ ಅಭಿಯನಯಿಸಿದರೆಂದು ತಿಳಿದು ಬರುತ್ತದೆ.

ಇವರ ಪಾತ್ರದ ಅಭಿನಯ ನೋಡಿ ಜನ ಕಿಕ್ಕಿರಿದು ತುಂಬುತ್ತಿದ್ದರು, ನಂತರ ಇವರೇ ಒಂದು ಕಂಪನಿಯನ್ನು ಕಟ್ಟಿ, ಸಂಪೂರ್ಣ ಹೇಮರಡ್ಡಿ ಮಲ್ಲಮ್ಮ ನಾಟಕ ಪ್ರದರ್ಶಿಸಿದನ್ನು ಕಾಣಬಹುದು. ಈ ನಾಟಕದಲ್ಲಿ ಪ್ರಮುಖ ಸ್ತ್ರೀ ಪಾತ್ರವಾದ ಮಲ್ಲಮ್ಮನೇ ತಾವಾಗಿ ಅಭಿನಯಿಸಿದರು. ಶಿವ ಭಕ್ತೆಯಾದ ಮಲ್ಲಮ್ಮ ಹಣೆಯಲ್ಲಿ ತ್ರಿಪುಂಡ ಭಸ್ಮ ಮಧ್ಯದಲ್ಲಿ ಕುಂಕುಮ ಬೊಟ್ಟು, ಕೊರಳಲ್ಲಿ ರುದ್ರಾಕ್ಷಿ, ರೇಷ್ಮೆ ದಡೆ ಸೀರೆ ಧರಿಸಿ ರಂಗ ಮಂಟಪದ ಮೇಲೆ ಬಂದರೆ ಜನ ಬೆರಗಾಗುತ್ತಿದ್ದರೆಂದು ತಿಳಿದು ಬರುತ್ತದೆ. ಮಲ್ಲಮ್ಮನ ಪತಿ ಭಕ್ತಿ ಹಾಗೂ ಶ್ರೀ ಮಲ್ಲಿಕಾರ್ಜುನನ ಮೇಲೆ ಇಟ್ಟ ಶಿವ ಕರುಣೆ, ಅದ್ಭುತವಾಗಿ ಕಂಡು ಬರುತ್ತಿತ್ತು. ಈ ಎಲ್ಲವುಗಳನ್ನು ನೋಡಿದ ಮಹಿಳಾ ಪ್ರೇಕ್ಷಕರು ತಾವೂ ಕೂಡ ದೇವರ ಹಾಗೂ ಗಂಡನ ಮೇಲೆ ಭಕ್ತಿ ಪ್ರೀತಿ, ವಾತ್ಸಲ್ಯ ತೋರಿಸಬೇಕೆಂಬ ಹಂಬಲ ಬರುತ್ತಿತ್ತು. ಈ ಸಂಗತಿಗಳನ್ನು ನೋಡಿದರೆ ಗ್ರಾಮೀಣ ಪ್ರದೇಶದಲ್ಲಿ ಕಂಡು ಬರುವ ಮಹಿಳೆಯರ ಮನಸ್ಸು ಪರಿವರ್ತನೆಯಾಗುವುದರಲ್ಲಿ ಯಾವ ಸಂದೇಹವೇ ಇಲ್ಲವೆಂದು ಹೇಳಬಹುದು. ಶ್ರೀ ಸಿದ್ಧಗಿರಿ ಸ್ವಾಮಿಗಳು ಸ್ವತಹ ತಮ್ಮ ನಾಟಕ ಕಂಪನಿಯಲ್ಲಿ ಮಾತ್ರವಲ್ಲ ಇತರ ನಾಟಕ ಕಂಪನಿಯಲ್ಲಿಯೂ ಪ್ರದರ್ಶನ ನೀಡುತ್ತಿದ್ದರು. ಮಲ್ಲಮ್ಮ ಹಾಗೂ ನಿಂಬೆಕ್ಕ ಶಿವ ಭಕ್ತಿ ತೋರುವ ಪಾತ್ರವಾದರೆ ಅಣ್ಣ-ತಮ್ಮ ನಾಟಕವು ಸಹೋದರರು ಯಾವರೀತಿಯಿಂದ ಇರಬೇಕೆಂಬುದರ ಬಗ್ಗೆ ತಿಳಿದು ಬರುತ್ತದೆ. ಕೃಷ್ಣನ ಪಾತ್ರ ಕೌರವ ಪಾಂಡವರನ್ನು ಒಂದು ಮಾಡುವ ದೃಶ್ಯವಂತೂ ಅದ್ಭುತವಾಗಿ ಕಂಡು ಬರುತ್ತಿತ್ತು. ಈ ಎಲ್ಲ ನಾಟಕಗಳಿಂದ ನಾಡಿನಲ್ಲಿರುವ ಪ್ರೇಕ್ಷಕರ ಮೇಲೆ ಪ್ರಭಾವ ಬೀರಿ, ನಾವು ಹೀಗೆ ಇರಬೇಕೆಂಬ ಅಭಿಪ್ರಾಯ ಮೂಡುತ್ತಿತ್ತು.

ಶ್ರೀ ಸಿದ್ಧಗಿರಿ ಸ್ವಾಮಿಗಳು ಅದ್ಭುತವಾದ ಕಲಾ ಪ್ರತಿಭೆಯನ್ನು ಪ್ರದರ್ಶನ ಮಾಡಿ ನಾಡಿನಾದ್ಯಂತ ಶ್ರೇಷ್ಠತೆ ಪಡೆದಿದ್ದರು. ಇವರ ಕಲೆಯನ್ನು ಅವರ ಮುಂದಿನ ಪೀಳಿಗೆಗೆ ದಾರೆ ಎರೆದರು ಎಂಬುದು ತಿಳಿದು ಬರುತ್ತದೆ.

ನಾಟಕ ಕಲೆಗೆ ವಿಧಾಯ ಹೇಳಿದ ಶ್ರೀ ಸಿದ್ಧಗಿರಿ ಸ್ವಾಮಿಗಳು ಅಧ್ಯಾತ್ಮದ ಕಡೆಗೆ ತಿರುಗಿದ್ದು ಕಂಡು ಬರುತ್ತದೆ. ಪುರಾಣ – ಪ್ರವಚನ ಹೇಳಲು ಪ್ರಾರಂಭಿಸಿದರು, ಜನರ ಮನಸ್ಸಿನ ಕೊಳೆಯನ್ನು ತೊಳೆಯಬೇಕೆಂದು ಆಧ್ಯಾತ್ಮದ ನೀತಿಯನ್ನು ಕಲಿಸಕೊಟ್ಟರು. ಇದರ ಜೊತೆಗೆ ಭಜನಾ ಕಂಪನಿಕಟ್ಟಿದರು. ಶ್ರೀ ಮನ್ನಿಜಗುಣ ಶಿವಯೋಗಿಗಳ ಕೈವಲ್ಯ ಪದ್ಧತಿಯ ಸ್ವಾರಸ್ಯ ಹೇಳುವುದರೊಂದಿಗೆ ಹಾಡುತ್ತಿದ್ದರು. ಒಳ್ಳೆಯ ರಾಗ, ತಾಳ, ಮೇಳಗಳಿಂದ ಪ್ರದರ್ಶಿಸುತ್ತಿದ್ದುದು ಕಂಡು ಬಂದಿದೆ.

ಸಿದ್ಧಗಿರಿ ಸ್ವಾಮಿಗಳ ಲಿಖಿತ ವಿವೇಚನೆಯನ್ನು ಮಾಡಲಾಗಿದೆ. ಶ್ರೀ ಸಿದ್ಧಗಿರಿ ಸ್ವಾಮಿಗಳ ಅಭಿನಯನ್ನು ನಿಲ್ಲಿಸಿದರೂ ರಂಗ ಪರಂಪರೆಯ ಮುಂದುವರಿಕೆಗೆ ಹೇಗೆ ಕಾರಣರಾದರೂ ಎಂಬುದನ್ನು ಈ ಪ್ರಬಂಧದಲ್ಲಿ ವಿವರಿಸಲಾಗಿದೆ.

ಪುರಾಣಗಳನ್ನು ಹೇಳುವುದು ಮತ್ತು ಭಜನೆ ಹಾಡುವುದುರ ಮುಕಾಂತರ ಶ್ರೀ ಸಿದ್ಧಗಿರಿ ಸ್ವಾಮಿಗಳು ಒಂದು ಆದರ್ಶ ನೈತಿಕ ಸಮಾಜ ನಿರ್ಮಿಸಲು ಪ್ರಯತ್ನಿಸಿದರೆಂಬುದನ್ನು ಪ್ರಬಂಧದಲ್ಲಿ ವಿವರಿಸಲಾಗಿದೆ.

ಕೊನೆಯ ಅಧ್ಯಾಯದಲ್ಲಿ ನಂತರದ ಕಾಲದಲ್ಲಿಯೂ, ನಡೆಯುತ್ತಿರುವ ನಾಟಕಗಳಾದ ವೀರ ಸಂಗೊಳ್ಳಿ ರಾಯಣ್ಣ, ರಕ್ತ ರಾತ್ರಿ, ವೀರ ಸಿಂಧೂರ ಲಕ್ಷ್ಮಣ, ನಾಟಕಗಳ ಪರಿಚಯ ನೀಡಲಾಗಿದೆ. ಮುಂದೆ ಆ ನಾಟಕಗಳಲ್ಲಿ ಪಾತ್ರ ಮಾಡುತ್ತಿರುವವರ ಹೆಸರುಗಳನ್ನು ಉಲ್ಲೇಖಿಸಲಾಗಿದೆ.

ಕೊನೆಯಲ್ಲಿ ಅವರು ನಾಟಕ ಶಾಲೆ ಸ್ಥಾಪಿಸಿದ, ಮಲ್ಲಮ್ಮನ ಮೂರ್ತಿ, ಪ್ರತಿಷ್ಠಾಪನೆ ಮಾಡಿದ ಹಾಗೂ ಅವರು ಅಭಿನಯಿಸಿದ ನಾಟಕಗಳ ಭಾವ ಚಿತ್ರಗಳನ್ನು ನೀಡಲಾಗಿದೆ.

ಈ ಸಂದರ್ಭದಲ್ಲಿ ಅವರಿಗೆ ದೊರೆತಿದ್ದ ಸನ್ಮಾನ ಪತ್ರಗಳನ್ನು ಉಲ್ಲೇಖಿಸಲಾಗಿದೆ.

ಶ್ರೀ ಸಿದ್ಧಗಿರಿ ಸ್ವಾಮಿಗಳು ಉತ್ತರ ಕರ್ನಾಟಕದ ಬಾಗಲಕೋಟ ಜಿಲ್ಲೆಯ ಜಮಖಂಡಿ ತಾಲೂಕಿನ ಮಧುರಖಂಡಿಯ ಹೆಸರನ್ನು ತಮ್ಮ ರಂಗ ಜೀವನದ ಮುಕಾಂತರ ಕರ್ನಾಟಕದ ನಕಾಶೆಯಲ್ಲಿ ಗುರುತಿಸಿದ್ದಾರೆ. ಇವರ ರಂಗ ಸೇವೆಯನ್ನು ಗುರುತಿಸಿ ಕರ್ನಾಟಕದ ಜಾನಪದ ಮತ್ತು ಯಕ್ಷಗಾನ ಆಕಾಡೆಮಿಯು ೧೯೯೭ರಲ್ಲಿ ಗೌರವ ಪ್ರಶಸ್ತಿ ನೀಡಿದೆ.

ಈ ಸಂಶೋಧನೆಗೆ ಲಿಖಿತ ಕೃತಿಗಳನ್ನು ಮತ್ತು ಮೌಖಿಕ ಸಂದರ್ಶನಗಳ ಹಾಗೂ ಧ್ವನಿ ಸುರುಳಿಗಳ ಸಹಾಯವನ್ನು ತೆಗೆದು ಕೊಳ್ಳಲಾಯಿತು.

# ಪರಾಮರ್ಶನ ಗ್ರಂಥಗಳು


| ಕೃತಿಗಳು ಮತ್ತು ಲೇಖಕರು | ಪ್ರಕಾಶನ | ಪ್ರಕಟಣಾ ವರ್ಷ |
|---|---|---|
| ೧. ಅಪರಾಳ ತಮ್ಮಣ್ಣ ಕೃತ ಶ್ರೀ ಕೃಷ್ಣ ಪಾರಿಜಾತ ಪ್ರಧಾನ ಸಂಪಾದಕರು *ಹಾ. ಮಾ. ನಾಯಕ ಸಂಪಾದಕರು, ಆರ್. ಈ. ಕುಲಕರ್ಣಿ ಅರಕೇರಿ | ಉಷಾ ಪ್ರೆಸ್ ಚಂದ್ರಗುಪ್ತ ರಸ್ತೆ, ಮೈಸೂರ | ೧೯೭೨ |
| ೨. ಜಮಖಂಡಿ ಇತಿಹಾಸ ದರ್ಪಣ (ಆರಂಭದಿಂದ ಕ್ರಿ.ಶ.೧೯೪೮ರ ವರೆಗೆ ಪ್ರೋ. ಎಸ್. ಬಿ. ಮಟೋಳಿ | ಶ್ರೀ ಹನುಮಾನ ಆರ್ಪಸೆಟ್ ಮತ್ತು ಅವರ ಬಳಗದವರು ಜಮಖಂಡಿ | ೨೦೦೮ |
| ೩. ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿ ಡಾ. ರಾಮಕೃಷ್ಣ ಮರಾಠೆ | ಇಳಾ ಪ್ರಿಂಟರ್ಸ್ –೧೫೩, ೪ನೇ ಮುಖ್ಯ ರಸ್ತೆ ೮ನೇ ಅಡ್ಡ ರಸ್ತೆ ಚಾಮರಾಜ ಪೇಟ ಬೆಂಗಳೂರು–೫೬೦೦೧೮ | ೧೯೯೪ |
| ೪. ಜಾನಪದ ರಂಗಭೂಮಿ ಪ್ರಧಾನ ಸಂಪಾಕರು ಬಿ. ಪುಟ್ಟಸ್ವಾಮಯ್ಯ | ಬೃಂದಾವನ ಪ್ರಿಂಟರ್ಸ್ ಆಂಡ್ ಪಬ್ಲಿಷರ್ಸ್ (ಪ್ರೈ) ಲಿ. ಲಾಲ್ ಬಾಗ ರಸ್ತೆ ಬೆಂಗಳೂರು –೪ | ೧೯೭೨ |
| ೫. ಕುರುಕ್ಷೇತ್ರ ನಾಟಕ ಶತಮಾನದ ನಾಟಕ ಸಂಪಾದಕರು ಕೆ. ಮರುಳ ಸಿದ್ದಪ್ಪ | ಪ್ರಥಮ ಮುದ್ರಣ ಹಕ್ಕುಗಳು : ಆಯಾ ನಾಟಕದ ಲೇಖಕರು. | ೨೦೦೩ |
| ೬. ಗಿರೀಶಗೀತೆ ಶತಕ ಸಂ. ಐ. ಬಿ. ಮಠಪತಿ | ಶ್ರೀ ವಿಶಾಲ ಪ್ರಿಂಟರ್ಸ್ ನಂ. ೧೫೩, ೮ನೇ ಅಡ್ಡ ರಸ್ತೆ ೪ನೇ ಮುಖ್ಯ ರಸ್ತೆ ಚಾಮರಾಜ ಪೇಟ | ೧೯೮೨ |
| ೭. ಮಂಗಲಗೀತೆ | ಫ. ಶಿ. ಭಾಂಡಗೆ ತ್ವರಿತ | |

# ಪರಾಮರ್ಶನ ಗ್ರಂಥಗಳು


| | ಕೃತಿಗಳು ಮತ್ತು ಲೇಖಕರು | ಪ್ರಕಾಶನ | ಪ್ರಕಟಣಾ ವರ್ಷ |
|---|---|---|---|
| ೧. | ಅಪರಾಳ ತಮ್ಮಣ್ಣ ಕೃತ ಶ್ರೀ ಕೃಷ್ಣ ಪಾರಿಜಾತ ಪ್ರಧಾನ ಸಂಪಾದಕರು *ಹಾ. ಮಾ. ನಾಯಕ ಸಂಪಾದಕರು, ಆರ್. ಈ. ಕುಲಕರ್ಣಿ ಅರಕೇರಿ | ಉಷಾ ಪ್ರೆಸ್ ಚಂದ್ರಗುಪ್ತ ರಸ್ತೆ, ಮೈಸೂರ | ೧೯೭೨ |
| ೨. | ಜಮಖಂಡಿ ಇತಿಹಾಸ ದರ್ಪಣ (ಆರಂಭದಿಂದ ಕ್ರಿ.ಶ.೧೯೮ರ ವರೆಗೆ ಪ್ರೋ. ಎಸ್. ಬಿ. ಮಟೋಳಿ | ಶ್ರೀ ಹನುಮಾನ ಆರ್ಪಸೆಟ್ ಮತ್ತು ಅವರ ಬಳಗದವರು ಜಮಖಂಡಿ | ೨೦೦೮ |
| ೩. | ಉತ್ತರ ಕರ್ನಾಟಕದ ವೃತ್ತಿ ರಂಗಭೂಮಿ ಡಾ. ರಾಮಕೃಷ್ಣ ಮರಾಠೆ | ಇಳಾ ಪ್ರಿಂಟರ್ಸ್ –೧೫೩, ೪ನೇ ಮುಖ್ಯ ರಸ್ತೆ ೮ನೇ ಅಡ್ಡ ರಸ್ತೆ ಚಾಮರಾಜ ಪೇಟ ಬೆಂಗಳೂರು–೫೬೦೦೧೮ | ೧೯೯೪ |
| ೪. | ಜಾನಪದ ರಂಗಭೂಮಿ ಪ್ರಧಾನ ಸಂಪಾಕರು ಬಿ. ಪುಟ್ಟಸ್ವಾಮಯ್ಯ | ಬೃಂದಾವನ ಪ್ರಿಂಟರ್ಸ್ ಆಂಡ್ ಪಬ್ಲಿಷರ್ಸ್ (ಪ್ರೈ) ಲಿ. ಲಾಲ್ ಬಾಗ ರಸ್ತೆ ಬೆಂಗಳೂರು –೪ | ೧೯೭೨ |
| ೫. | ಕುರುಕ್ಷೇತ್ರ ನಾಟಕ ಶತಮಾನದ ನಾಟಕ ಸಂಪಾದಕರು ಕೆ. ಮರುಳ ಸಿದ್ದಪ್ಪ | ಪ್ರಥಮ ಮುದ್ರಣ ಹಕ್ಕುಗಳು : ಆಯಾ ನಾಟಕದ ಲೇಖಕರು. | ೨೦೦೩ |
| ೬. | ಗಿರೀಶಗೀತೆ ಶತಕ ಸಂ. ಐ. ಬಿ. ಮಠಪತಿ | ಶ್ರೀ ವಿಶಾಲ ಪ್ರಿಂಟರ್ಸ್ ನಂ. ೧೫೩, ೮ನೇ ಅಡ್ಡ ರಸ್ತೆ ೪ನೇ ಮುಖ್ಯ ರಸ್ತೆ ಚಾಮರಾಜ ಪೇಟ | ೧೯೮೨ |
| ೭. | ಮಂಗಲಗೀತೆ | ಫ. ಶಿ. ಭಾಂಡಗೆ ತ್ವರಿತ | |

| | | | |
|---|---|---|---|
| | ಶ್ರೀ ರಾಜಶೇಖರ ದೇವರು | ಮುದ್ರಣ ಗಂಗಾಪೂರ ಪೇಟೆ | |
| ಸಂ. | ಮಹಂತಮತ ಮರೇಗುದ್ದಿ | ಗದಗ – ೫೮೨ ೧೦೧ | ೧೯೮೯ |
| ೮. | ಸಿದ್ದಲಿಂಗೇಶ್ವರ ಸ್ತುತಿ<br>ಸಿದ್ದಗಿರಿ ಸ್ವಾಮಿಗಳು | ಶ್ರೀ ಶರಣ ಶಿವಲಿಂಗೇಶ್ವರ<br>ಆಶ್ರಮ ಸೂ ಕ್ಷೇತ್ರ ಸಪ್ತಾಪೂರ<br>ಜಿ. ಬಿದರ | ೧೯೮೧ |
| ೯. | ದೃಷ್ಟಾಂತ ದೀಪ್ತಿ<br>ಸಿದ್ದಗಿರಯ್ಯಾ ಮಠಪತಿ | ಶ್ರೀ ಹನುಮಾನ ಮುದ್ರಣಾಲಯ<br>ಜಮಖಂಡಿ | |
| ೧೦. | ಹುನ್ನೂರ ಹೊನ್ನ<br>ಪ್ರೋ. ಸಂಗಮೇಷ ಬಿರಾದಾರ<br>ಪಾತ್ರದಾರಿಗಳ ಉಡುಗೆ<br>ನೋಡಿ ತಿಳಿಯಲಾಯಿತು | ಶ್ರೀ ಆರ್. ಈ. ಹುನ್ನೂರ ಮುದ್ರಣ<br>೧೪೧ ವಿಶ್ವೇಶ್ವರ ನಗರ ಹುಬ್ಬಳ್ಳಿ<br>೫೮೦ ೦೩೨. | ೧೯೯೫ |
| ೧೧. | ಉತ್ತರ ಕರ್ನಾಟಕದ ವೃತ್ತಿ<br>ರಂಗಭೂಮಿ<br>ಡಾ. ರಾಮಕೃಷ್ಣ ಮರಾಠೆ<br>ಪುಟ – ೩೩೦ | ಇಳಾ ಪ್ರಿಂಟರ್ಸ್ ೧೫೩, ೪ನೇ<br>ಮುಖ್ಯ ರಸ್ತೆ ೮ನೇ ಅಡ್ಡ ರಸ್ತೆ<br>ಚಾಮರಾಜ ಪೇಟ<br>ಬೆಂಗಳೂರು–೫೬೦ ೦೧೮ | ೧೯೯೪ |



ಚಲನ ಚಿತ್ರನಟ ವಿಜಯರಾಘವೇಂದ್ರ ಅವರಿಂದ

ಶ್ರೀ ಸಿದ್ಧಗಿರಿ ಸ್ವಾಮಿಗಳಿಗೆ ಸನ್ಮಾನ



ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ

ಪುರಸ್ಕಾರ ೧೯೯೭ ರಲ್ಲಿ

